ಕನ್ನಡ

# ಪದ್ಯಪಾಠಗಳ ಟಿಪ್ಪಣಿ

SECOND EDITION

ಶೆಣೈ ಬ್ರದರ್ಸ್ ಎಂಡ್ ಕಂಪೆನಿ,
ರಥಬೀದಿ, ಮಂಗಳೂರು.

1927

Price: 4 Anna. ಬೆಲೆ: 4 ಆಣೆ.





॥ ಶ್ರೀಃ ॥

# ಕನ್ನಡ ಪದ್ಯಪಾಠಗಳ ಟಿಪ್ಪಣಿ.

## A. ಕ್ಲಿಷ್ಟಪದಗಳು.

[ಅಂಕೆಗಳು ಪದ್ಯಪಾಠಗಳ ಪುಸ್ತಕದ ಪುಟಸಂಖ್ಯೆಯನ್ನು ಸೂಚಿಸುತ್ತಿವೆ.]

1. ಇಬ್ಬರು+ಉಂಟೇ–ಇಬ್ಬರಿದ್ದಾರೆಯೇ? ಸರ್ವಜ್ಞ–ಎಲ್ಲವನ್ನು ಬಲ್ಲವನಾದ. ಕರ್ತ–(ಕೃತಿಮಾಡು) ಮಾಡಿದವನು, ಒಡೆಯನು. 'ಸರ್ವಜ್ಞ'–ಇದು ಕವಿಯ ಬಿರುದು; ಅವನ ಪ್ರತಿಪದ್ಯದ ಕೊನೆಯಲ್ಲಿದೆ. ಚಿತ್ರ–ಬಗೆಬಗೆಯ ಬಣ್ಣ. ವಿಚಿತ್ರ–ಬಗೆಬಗೆಯ ..ಕ್ಷತ್ರಗಳು. ವಿಧ+ವಿಧ–ವಿವಿಧ. ಚಿತ್ರಿಸು–ರಚನೆಮಾಡು. ಎಳನೀರು (ಎಳತು+ನೀರು). ಭೃಂಗ–ತುಂಬಿ (ದ್ಭ–ಬಿಂಗ). ಕೋಕಿಲಾ (ದ್ಭ–ಕೋಗಿಲೆ). ಹಿಡಿಹಣ್ಣು–ಹಿಡಿತುಂಬುವ ಹಣ್ಣು–ಎರಡೂ ಹಿಡಿಗಳಿಂದ ಹಿಡಿವಷ್ಟು ದೊಡ್ಡಹಣ್ಣು. ಕುಂಬಳ–(ತ್ಸ: ಕೂಷ್ಮಾಂಡ). ಮಿಡಿ (ಎಳೆಯಂತಿರುವ) ಹಣ್ಣು; ಸಣ್ಣ ಹಣ್ಣು. ಪಾಂಥ–ದಾರಿಗ. ಬಣ್ಣಿಸಿ–ಬಣ್ಣಕೊಟ್ಟು. ಪಠ–ಚಿತ್ರ. ಕೋಳಿ (ತ್ಸ: ಕುಕ್ಕುಟ). ಆಳಿನ+ಆಳು+ಅಯ್ಯ–ತನ್ನ ಆಳಿಗೆ ಆಳಿನಂತೆ, ಭಕ್ತರ ಅಪೇಕ್ಷೆಗಳನ್ನು ತಾನೇ ಆಳಾಗಿ ನಡೆಸಿ ಕೊಡುವವನಪ್ಪ. ಒಳು (ಹ. ಗ. ಪ್ರತ್ಯಯ)–ಅಲ್ಲಿ. ಆರು(ಹ. ಗ.) ಯಾರು. ಇಂ, ಇಂದಂ, ಇಂದೆ (ಹ. ಗ. ತೃತೀಯಾವಿಭಕ್ತಿ ಪ್ರತ್ಯಯ.)–ಇಂದ.

2. ಧರೆ (ಭೂಮಿ) ಪತಿ (ಒಡೆಯ)–ನೆಲದೊಡೆಯ. ರಾಜನಿಗೂ ರಾಜ್ಯಕ್ಕೂ ಸಂಬಂಧವಿರುವ ಹಾಗೆಯೆ, ದೇಹಕ್ಕೂ ಆತ್ಮಕ್ಕೂ ಸಂಬಂಧವಿದೆ. ಒಂದರ ಹಾನಿಯು ಮತ್ತೊಂದಕ್ಕೆ ತಟ್ಟುವುದು. ಎರಡನ್ನೂ ಹೋಲಿಸು. ಸಿರಿ–(ತ್ಸ: ಶ್ರೀ) ಸಂಪತ್ತು. ದೆಸೆ (ತ್ಸ) ದಿಶಾ–ದಿಕ್ಕು; ಆಶ್ರಯ. ಕರಿ (ಕರವೆಂಬ ಸೊಂಡಿಲುಳ್ಳುದು) ಆನೆ. ತುರ (ವೇಗವಾಗಿ) ಗ (ಚರಿಸುವುದು)–ಕುದುರೆ. ಬಲವು–ಸೇನೆಯು. ಅರಸನ ಪ್ರೀತಿದೊರೆತರೆ ಸಂಪತ್ತು, ಕೋಪಕ್ಕೆ ಗುರಿಯಾದರೆ ಆಪತ್ತು. ಮಂದಿ–ಜನ ಪ್ರಜೆಗಳು, ಪರಿವಾರ. ಕಂದರು–ಮಕ್ಕಳು. ನುಲಿಬೆಂದ ಹೊರಸಿನ+ಅಂತೆ+ಅಕ್ಕು (ನುಲಿ–ದಾರ, ಹೊರಸು–ಮಂಚ); ದಾರವನ್ನು ಹೆಣೆದ ಮಂಚದ, ದಾರವು ಸುಟ್ಟರೆ ಅಥವಾ ಹರಿದರೆ ಆ ಮಂಚವು ಕೆಲಸಕ್ಕೆ ಬಾರದು. ಮಠ-ವಿದ್ಯಾಲಯ. ಅಶ್ವ (ಕುದುರೆ)+ಮೇಧ (ಸಂಬಂಧವುಳ್ಳದ್ದು) ಕುದುರೆಯ ಮಾಂಸವನ್ನು ಹೋಮಿಸಿ ಮಾಡುವ ಯಜ್ಞ; ಸ್ವರ್ಗವನ್ನು ಬಯಸಿ ಅರಸುಗಳು ಹಿಂದೆ ಈ ಯಜ್ಞ ಮಾಡುತ್ತಿದ್ದರು. ರಾಜನಿಗಾಗಿ ಪ್ರಾಣವನ್ನು ಕೊಡಲು ಮುಂದಾದರೆ, ಹಜ್ಜೆಗೆ ಒಂದೊಂದು ಅಶ್ವಮೇಧ ಯಾಗ ಮಾಡಿದ ಪುಣ್ಯವಿದೆ; ಹಿಂದೋಡಿದರೆ ನರಕ! ಎರೆ–ಎರೆಮಣ್ಣಭೂಮಿ. ಹಿಡಿ–ಆಶ್ರಯಿಸು. ಉರ (ಹೊಟ್ಟೆಯಿಂದ) + ಗ (ಹೋಗುವುದು)–ಸರ್ಪ; ಭೂ

ಷಣ (ಅಲಂಕಾರವುಳ್ಳವ)ನು, ಶಿವನು. (ಬಹುವ್ರೀಹಿಸಮಾಸ.) ಅರಿದು–ಅಸಾಧ್ಯ. ತೆರೆದ (ತೆರೆದೇ ಇರುವ) ಹಸ್ತ–ಕೈ; ಉದಾರಹಸ್ತ; ಕೊಡುಗೈ; ದಾನಧರ್ಮಮಾಡುವ ಕೈ. ಪೂಜ್ಯವು–ಯೋಗ್ಯತೆಯು. ಶರಣು–ಆಶ್ರಯ. ಕೆಡುಗು, ಅಕ್ಕು (ಹ. ಗ) ಕೆಡುವುದು, ಆಗುವುದು.

3. ಗುರುಮುಖ....ಇಲ್ಲ–ವಿದ್ಯೆ ಮೊದಲಾದುವುಗಳನ್ನು ಕಲಿತರೂ, ಗುರುಗಳ ಮುಖಾಂತರ ಜ್ಞಾನದ ತಿರುಳನ್ನು ತಿಳಿದುಕೊಳ್ಳದೆ ಇದ್ದಲ್ಲಿ ಮೋಕ್ಷ ಸಿಗದು. ಮಣಿ(ರತ್ನ)ಯಂತೆ ಶ್ರೇಷ್ಠತೆ ಹೊಂದುವುದು. ಪರಿಣಾಮ–ಸುಖ. ಪದ–ಸ್ಥಾನ. ನೆರೆಮನೆ....ಅಕ್ಕು–ನೆರೆಮನೆಯಂತೆ ಸೇರುವುದಕ್ಕೆ ಸಮೀಪವೂ ಸುಲಭವೂ ಆಗುವುದು. ಕೈಲಾಸ (ಕೇಲಸ–ಸ್ಫಟಿಕ) ಬಿಳುಪಾದ ಬೆಟ್ಟ. ಕರ್ಪುರದ.... ಬೆಂದಂತೆ–ಕರ್ಪುರದ ಬೆಟ್ಟಕ್ಕೆ ಬೆಂಕಿಹತ್ತಿದರೆ, ಬೂದಿಕೂಡ ಉಳಿಯದಂತೆ, ಒಮ್ಮೆಯೇ ಸುಡುವುದು. ಪಾಪವು ಅಳಿದು ಹೋಗುವುದು. ಮರಹು (ಮರೆ–ಧಾ) ಬುದ್ಧಿಬಲವಿಲ್ಲದಿರುವಿಕೆ. ಅರಿವುದಕ್ಕೆ–ಜ್ಞಾನಸಂಪಾದನೆಗೆ; ತೆರನು–ಉಪಾಯವು; ಕರಿ+ಕೊಂಡ ಬೆಳಲಹಣ್ಣು+ಅಂತೆ–ಆನೆ ತಿಂದ ಬೇಲದ ಹಣ್ಣಿನ ಹಾಗೆ. ಆನೆಯು ಬೇಲದ ಹಣ್ಣನ್ನು ಇಡೀ ನುಂಗುವುದು; ಅದರಂತೆ ಇಡೀ ಹಣ್ಣನ್ನೇ ತನ್ನ ಲದ್ದಿಯಲ್ಲಿ ಹೊರಗಿಕ್ಕುವುದು. ಆದರೆ ಅದನ್ನು ಒಡೆದಲ್ಲಿ ತಿರುಳು ಕಾಣದು. ಸಂಪತ್ತು ಬರುವಾಗ ಸೀಯಾಳದೊಳಗಿನ ನೀರಿನಂತೆಯೂ, ಹೋಗುವಾಗ ಆನೆ ತಿಂದ ಬೇಲದ ಹಣ್ಣಿನೊಳಗಿನ ತಿರುಳಿನಂತೆಯೂ,–ಬಂದುದೂ ಹೋದುದೂ ತಿಳಿಯದಂತೆ ಇರುವುದು. ಗುರುಬೋಧೆ–ಗುರುವಿನ ಉಪದೇಶ. ನೆರೆ+ಕೊಳ್ಳು–ಸಹಾಯವಾಗು. ಜನರು ಕೇವಲ ಮರೆವೆಯುಳ್ಳವರು; ಆನೆಯು ಬೆಳಲಕಾಯಿಯನ್ನು ಒಡೆಯದೆ ತಿರುಳನ್ನು ಹೊರಗೆಡವ ತೆರದಲ್ಲಿ, ತಾವು ಹೇಗೆ ಜ್ಞಾನಿಗಳಾದೆವು, ತಮ್ಮ ಅಜ್ಞಾನವು ಹೇಗೆ ಪರಿಹಾರವಾಯಿತು ಎಂಬುದನ್ನು ತಿಳಿಯಗೊಡದಂತೆ ಉಪದೇಶಿಸಿ ಸದ್ಗುರುವು ಶಿಷ್ಯನಿಗೆ ಜ್ಞಾನಕೊಡುವನು. ಬಳ್ಳಿ(ಯಂತಿರುವ) ಕುರುಡರು. ಕುರುಡರ ಸಾಲು. ಬಳ್ಳ (ತ್ಸ)ವಲ್ಲೀ. ಹಳ್ಳ(ತ್ಸ) ಪಟ್ಟಲ. ಕುರುಡನನ್ನು ಕುರುಡನು ಹಿಂಬಾಲಿಸಿದರೆ, ಇಬ್ಬರೂ ಹಳ್ಳದಲ್ಲಿ ಬಿದ್ದು ಅಪಾಯಹೊಂದುವರು; ಮೂರ್ಖನನ್ನು ಗುರುವೆಂದು ಹಿಂಬಾಲಿಸುವ ಹೆಡ್ಡ ಶಿಷ್ಯರು ಅವನೊಡನೆ ತಾವೂ ಹಾನಿಹೊಂದುವರು. ಮುಕ್ತಿ–ಮೋಕ್ಷ. ಬೆಳ್ಳುಳ್ಳಿ.... ಬೀಳುವುದು,–ಬೆಳ್ಳುಳ್ಳಿಯನ್ನು ಹೊಡೆದರೆ ಬೇರೆ ಬೇರೆ ಹೋಳಿಸುವ ಹಾಗೆ, ಉತ್ತಮ ಗುರುವಿನ ಉಪದೇಶದಿಂದ ಪಾಪವೂ ಹೋಳುಹೋಳಾಗಿ ಬೀಳುವುದು. ಹಳಿ–ನಿಂದಿಸು. ಬರೆವರು (ಬರಹಗಾರರು) ಬುದ್ಧಿವಂತರು. ಎರವು (ಬೇಡಿ ತರುವಿಕೆ) ಕಷ್ಟ.

4. ಮೊಟ್ಟೆ.....ಇಳಿದನೆ–ಗಂಟುಮೂಟೆ ಕಟ್ಟಿಕೊಂಡೇ ಹುಟ್ಟಿದನೇನು? ಕಟ್ಟಿ+ಒಯ್ಯಲು+ಅರಿಯಂ+ಅದನ್ನು+ಅರಿತು–ಕಟ್ಟಿಕೊಂಡು ಹೋಗಲು ಅಸಾಧ್ಯ

ವೆಂಬುದನ್ನು ತಿಳಿದುಕೊಂಡು, ಕೊಟ್ಟು+ಉಂಬ (ಉಣುವ)-ಬಂದಾಗ ತರಲಿಲ್ಲ, ಹೋಗುವಾಗ ಒಯ್ಯುವುದಿಲ್ಲ. ಇತರರಿಗೆ ಕೊಟ್ಟು ತಾನೂ ಉಣುವವನೇ ದಾನ ಶೂರನು, (ಸಂಪತ್ತು) ಉಳ್ಳ+ಆಗ. ಒಡವೆ (ಬದುಕು) ನೃ (ಜನರನ್ನು) ಪ (ಪಾಲಿಸುವವನು)-ರಾಜ. ಹೊನ್ನು+ಆಗದೆ+ಎಂತು+ಇಹುದು-ಬಂಗಾರದಂತೆ ಆ ದಾನವೂ ಸ್ವಲ್ಪವಾದರೂ ಬಹು ಬೆಲೆಯುಳ್ಳದಾಗುವುದು.

5. ಸತ್ತಿಗೆ (ತ್ಸ-ಛತ್ರಕ) ಕೊಡೆ; ಶ್ವೇತಚ್ಛತ್ರವೆಂಬ ಬಿಳಿಯ ಕೊಡೆ. ತನಿ (ಸರಿಯಾದ) ರಸವನ್ನು; ಹೊರಗಣ ಸಿಪ್ಪೆ ಕುರಿಯು ಜಗಿವುದಲ್ಲದೆ, ಸಿಹಿರಸವನ್ನೇನೂ ಹೀರದ ಕುರಿಯು ಹಾಗೆ ಉತ್ತಮ ಗ್ರಂಥವನ್ನೋದಿಕೊಂಡರೂ ಮೂರ್ಖರು ಅದರೊಳಗಿನ ಸತ್ಯಸ್ವರೂಪವನ್ನರಿತುಕೊಳ್ಳದೆ, ಅಲಂಕಾರವೇ ಮೊದಲಾದ ಇತರ ಹೊರ ವಿಷಯಗಳನ್ನೆ ನೋಡುತ್ತಿರುವರು. [ಉಪಮಾಲಂಕಾರ-ಹೋಲುವೆಯುಳ್ಳದೇ ಉಪಮಾಲಂಕಾರ] ಶರ (ನೀರಿನ)+ಧಿ (ಸಮೂಹವುಳ್ಳುದು)-ಸಮುದ್ರ; (ಬಹುವ್ರೀಹಿ ಸಮಾಸ) ಒತ್ತಿ ಹರಿದರೆ-ಮೇರೆಮೀರಿ ಬಂದರೆ; ತಪ್ಪಿನಡೆದರೆ-ಅನ್ಯಾಯ ಮಾಡಿದರೆ; ಲೋಕ-ಜನರು. ಸೇರು-ಮರೆಹೋಗು. ಕೋಪ....ನೆಲೆಗಟ್ಟು-ಸಿಟ್ಟೆಂಬುದು ಎಲ್ಲಾ ಪಾಪಗಳಿಗೂ ಕಾರಣವು. ಕೂಪ (ಕುತ್ಸಿತವಾದ ನೀರುಳ್ಳುದು) ಬಾವಿ, ನೇಣ-ನೀರೆತ್ತುವ ಬಳ್ಳಿ. ಬಾವಿಯಿಂದ ನೀರ ಕೊಡವನ್ನೆತ್ತುವ ಬಳ್ಳಿಯು, ನಡುವೆ ಫಕ್ಕನೆ ತುಂಡಾದರೆ, ಕೊಡವು ಮುಳುಗುವ ಹಾಗೆ, ಪುಣ್ಯದ ಬಲದಿಂದ ಸ್ವರ್ಗಕ್ಕೇರುವವನಾದರೂ, ಕೋಪದಿಂದಾದ ಅನಾಹುತದಿಂದ ಒಮ್ಮೆಗೇ ನಾಶಹೊಂದುವನು. ಇಹ ಪರಲೋಕಗಳ ಸುಖವು ಕೂಡಾ, ಕಣ್ಣಿನಿಂದ ನೋಡಿ ತಿಳಿದುಕೊಂಡ ಜ್ಞಾನದಿಂದಲೇ ದೊರೆವುದು. ದೇಹವನ್ನು ಹುತ್ತಕ್ಕೆ ಹೋಲಿಸುವುದಾದರೆ, ನಾಲಗೆಯನ್ನು ಅದರೊಳಗಿನ ಸರ್ಪಕ್ಕೂ, ಕೋಪವನ್ನು ಆ ಸರ್ಪದ ಕಡಿತದಿಂದುಂಟಾಗುವ ನಂಜಿಗೂ ಸಮಾಧಾನ (ಸಮತೆ) ವನ್ನು ವಿಷವೈದ್ಯನಿಗೂ ಹೋಲಿಸಲಾಗಿದೆ. ಗಾರುಡಿಗ (ಗರುಡವಿದ್ಯೆ ಬಲ್ಲವನು) ವಿಷವೈದ್ಯ. ಸಮತೆ (ತ್ಸ) ಶಮತಾ. [ಯಯಾತಿಯ ಕಥೆಯನ್ನು ಆರ್ಯಮತೋಪಾಖ್ಯಾನದಲ್ಲಿ ನೋಡುವುದು.]

6- ಸಿರಿಯಣ್ಣ (ಶ್ರೀಮಂತರು) ಸಿರಿ (ಸಂಪತ್ತು) ಇರುವ ತನಕ ಎಲ್ಲರೂ ಶ್ರೀಮಂತನನ್ನು ಗೌರವಿಸುವರು; ಅದಿಲ್ಲದಿದ್ದರೆ ಮರುದಿನದಿಂದಲೇ ಎಲ್ಲರೂ ಅವನನ್ನು ಅಗೌರವದಿಂದ ಕಾಣುವರು. ಬೆಂದ+ಆವಿಗೆಯ+ಕುಂಭದ+ಅಂತೆ+ಇಹನು. ಆವಿಗೆಯಲ್ಲಿ ಚೆನ್ನಾಗಿ ಸುಟ್ಟ ಗಡಿಗೆಯಂತೆ ಬೆಲೆತಗ್ಗಿ ಇರುವನು. ಹಾಲು (ಸೇರಿದ) ಓಗರ (-ಅನ್ನವನ್ನು) ಉಂಡಂತೆ ಹಿತವಾಗಿ ತೋರುವುದು. ಸಾಲಿಗ-ಸಾಲಕೊಡುವವ. ಕಿಬ್ಬದಿ (ಕೆಳಗು+ಬದಿ; ಅವ್ಯಯೀಭಾವ ಸಮಾಸ) ಮುರಿದಂತೆ, ಸಹಿಸಲು ಅಸಾಧ್ಯವಾದ ವ್ಯಥೆಯಾದಂತಾಗುವುದು. ಮಜ್ಜಿಗೆ ಊಟಕ್ಕೆ ಉತ್ತಮ; ಸ್ನಾನ

ಮಾಡುವಾಗ ಮೃತ್ತಿಕ್ಕೆ ಶುದ್ಧಮಾಡಿಕೊಳ್ಳುವುದು ಅವಶ್ಯವು; ಕಜ್ಜಾಯವನ್ನೂ, ತುಪ್ಪವನ್ನೂ ಭೋಜನಕ್ಕೆ ಉಪಯೋಗಿಸಬೇಕು. ಒಳಗಿನ ಗೃಹಕೃತ್ಯವಿಚಾರಕ್ಕಾಗಿ ಮನೆಗೊಬ್ಬ ಹಿರಿಯ ಮುದುಕಿಯಿರುವುದು ಉತ್ತಮವು. ಮಂಜಿಗೆ [ಮಂಜುಬೀಳುವುದಕ್ಕಿಂತ ಮಳೆಸುರಿಯುವುದು ಉತ್ತಮ. ಅಥವಾ] ಮುಂಜಾ ಎಂಬ ಹುಲ್ಲಿಗೆ ಮಳೆ ಅಗತ್ಯಹಿತವು. ಅರ (ಸು)+ಗಿಳಿ, ಅರಗಿಳಿ; 'ರಾಜಗಿಳಿ'. ಜಾಡ (ವಸ್ತ್ರ ನೇಯುವವನು) ಗಂಜಿ (ತ್ಸ) ಕಾಂಜಿಕಾ. ಅಡವಿ (ತ್ಸ) ಅಟವಿ. ಮೆಳೆ-ಪೊದರು. ನವಿಲು ಮೋಡವನ್ನು ನೋಡಿಯೆ ಕುಣಿವುದು. ಹೆಳವ-ಕಾಲಿಲ್ಲದವನು, ಕುಂಟ. ಬಡ್ಡಿ (ತ್ಸ) ವೃದ್ಧಿ. ಅಡ್ಡ (ತ್ಸ) ಅರ್ಧ. ಮನೆವಾರ್ತೆ-ಮನೆಬದುಕು. ಅಡ್ಡಕ್ಕು ಬೇಡ-ಅರ್ಧದುಡ್ಡಿಗೂ ಬೇಡ; ಅಷ್ಟು ಹೀನ.

## ಶಾಂತಿಪರ್ವದೊಳಗಿನ ಪದ್ಯಗಳು.

7. ಜನ (ರನ್ನು)+ಪ (ಪಾಲಿಸುವವನು) ಅರಸು. ನಿಚ್ಚ (ತ್ಸ) ನಿತ್ಯ. ಘನ (ಕಠಿನವಾದ) ತಪಸ್ಸನ್ನು. ತತ್+ಆಶ್ರಮ (ಜಶ್ತ್ವಸಂಧಿ)-; ವರ್ಗದ ಮೊದಲನೆ ಅಕ್ಷರಕ್ಕೆ ಮೂರನೆಯ ಅಕ್ಷರವು ಆದೇಶವಾಗಿ ಬರುವ ಸಂಧಿ. ವನ....ಆಶ್ರಮದೊಳ್-ಕಾಡುಮೃಗಗಳ ಸಮೂಹಕ್ಕೆ ಬೀಡಾಗಿರುವ ಆ ಋಷಿಗಳ ವಾಸಸ್ಥಾನದಲ್ಲಿ. ತರಕ್ಷು (ತ್ಸ-ಚಿರ್ಚು) ಚಿರತೆ. ಭಷಕ-ನಾಯಿ. ಸಂಯಮಿ-ಇಂದ್ರಿಯಗಳನ್ನು ಚೆನ್ನಾಗಿ ತನ್ನ ಸ್ವಾಧೀನಕ್ಕೆ ತಂದುಕೊಂಡವನು; ಋಷಿ. ಕರಿಗೆ+ಅಳುಕಿ-(ಕಾಡು) ಆನೆಗೆ ಬೆದರಿ. ಸಾರಮೇಯ (ಸರಮಾ-ಹೆಣ್ಣುನಾಯಿ; ಅದರಲ್ಲಿ ಹುಟ್ಟಿದ) ನಾಯಿ. ಹರಿ-ಸಿಂಹ. ಶರಭ-ಸಿಂಹಕ್ಕೆ ಹಗೆಯಾದ ಎಂಟು ಕಾಲುಳ್ಳ ಒಂದು ಮೃಗ. ಕೌಲೇಯಕ (ಕುಲ,-ಮನೆಯಲ್ಲಿರುವುದು) ನಾಯಿ. ಮೃಗ-ದೊಡ್ಡ ಮೃಗ (ಬೇಟೆಯಲ್ಲಿ ಮೃಗಗಳನ್ನು)+ದಂಶಕ (ಕಚ್ಚುವುದಾದ) ನಾಯಿ. ಸತ್ವ-ಪ್ರಾಣಿ. ಶಿಕ್ಷಿಪ-ಹೆದರಿಸುವ. ನಿಕಟ-ಹತ್ತಿರ. ಚಕಿತನು-ಹೆದರಿದವನು.

8. ವಾಸನೆ-ಸ್ವಭಾವ. ಸೆದೆದು-ಕೊಂದು. ಇಚ್ಛೆ (ತ್ಸ) ಇಚ್ಛಾ. ವಿಜ್ಞಾನ-ವಿಶೇಷವಾದ ಜ್ಞಾನ. ಭೃತ್ಯ (ಭೃತಿ-ಸಂಬಳ; ಅದಕ್ಕಾಗಿ ಕೆಲಸ ಮಾಡುವವ) ಸೇವಕ. ಅಂತೆಯೆ-ಹಾಗೆ. ಶಾಲ್ಮಲಿ-ಬೂರುಗ. ಶೈಲ (ಶಿಲೆಯುಳ್ಳದ್ದು) ಪರ್ವತ; ಹಿಮಾಲಯ ಬೆಟ್ಟದ ತಪ್ಪಲಲ್ಲಿ. ಮೂಲ-ಬೇರು. ಶಾಖೆ-ಗೆಲ್ಲು. ಕಾಲ....ಗಂಡಿತು-ಬಹುಕಾಲವನ್ನು ಬೆಳೆದು ಕಂಡಿತು. ಲೀಲೆ-ವಿನೋದ. ಮಹೀ(ಭೂಮಿ)+ಜ (ಹುಟ್ಟಿದ್ದು)-ಮರ. ಇರ್ದ (ಹ. ಗ) ಇದ್ದ. ಭೂ(ಭೂಮಿಯಲ್ಲಿ)ರುಹ(ಹುಟ್ಟಿದ್ದು)-ಮರ. ಅತಿ....ರಂಜಿಸುವೆ-ಬಹು ಎತ್ತರವಾಗಿಯೂ ವಿಸ್ತಾರವಾಗಿಯೂ ಹರಡಿರುವೆ. ಪವನ-ವಾಯು. ಅಟ್ಟುಳಿಗೆ-ಪೀಡೆಗೆ. ಎಡೆಗೆಡೆದುವು-ಮೊಗುಚಿಬಿದ್ದವು. ಉದಾರನು+ಎನಿಸಿದೆ-ಎತ್ತರವಾಗಿ ನಿಂದಿರುವೆ. ಅನಿಲ-ವಾಯು. ಗಹಗಹಿಸು-ನಗು. ಆತ್ಮ(ತನ್ನ)+ಅಖರ್ವ (ಕಡಿಮೆಯಿಲ್ಲದ.)

9. ಸಮೀರ–ವಾಯು. ಅಷ್ಟಮಾಂಶ–ಎಂಟನೆಯ ಒಂದು ಅಂಶ. ನಾರ (ಬ್ರಹ್ಮಜ್ಞಾನವನ್ನು)+ದ(ಕೊಡುವವನು) ಬ್ರಹ್ಮಜ್ಞಾನವನ್ನು ಉಪದೇಶಿಸುವವನಾದ ಬ್ರಹ್ಮನ ಮಾನಸಪುತ್ರನು. ಗಳಹು–ಬಗುಳು. ಗಿರಿನಿಕರ–ಬೆಟ್ಟಗಳ ಸಮೂಹ. ಭರ–ಹೊಡೆತ. ಮರುತಗಾಧೀನ....ಚೇಷ್ಟೆಗಳು–ಎಲ್ಲಾ ಪ್ರಾಣಿಗಳ ಯಾವತ್ತು ದೇಹ ವ್ಯಾಪಾರಗಳು ಉಸಿರಾಡುವ ತನಕ ಮಾತ್ರವೆ ನಡೆವುವು. ಮೂರ್ತಿ+ಅಷ್ಟಕ (ಪೃಥ್ವಿ, ಅಪ್, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಸೋಮಯಾಜಿ ಇವು) ಹರ (ಶಿವ)ನ ಎಂಟು ಮೂರ್ತಿಗಳು. ಅನಿಲ–ವಾಯು. ವಿಟಪಿ (ವಿಟಪ–ಗೆಲ್ಲು, ಎಲೆ ಮೊದಲಾದುವು) ಮರ. ಶೈಲ್ಯ....ದುರ್ಜಯನ–ಬೆಟ್ಟದಲ್ಲಿ ತೋರವಾದ ಬೇರುಗಳನ್ನು ಇಳಿಸಿ ಬಲವಾದ ಗೆಲ್ಲುಗಳಿಂದ ಬೆಳೆದಿರುವ ಬಲವಂತನಾದ. ಗಾಳಿ....ಠಾದರೆ–ಗಾಳಿ ಬಡೆದರೆ. ಸತ್ಯತೆಯಾದುದು–ಸತ್ಯವೆನಿಸುವುದು. ಇದಕೊಂಡು–ಇದನ್ನೇ ಉದಾಹರಣೆಯಾಗಿ ಇಟ್ಟುಕೊಂಡು. ಲೋಕ–ಜನರು. ತತ್+ಪ್ರಭಂಜನ+ನಾಮವ,–ಅದರ ಪ್ರಭಂಜನ ಎಂಬುವ ಹೆಸರನ್ನು (ಪ್ರ–ಮುಂದಿರುವದನ್ನು+ಭಂಜನ–ಮುರಿವುದು). ಅಳಿಗೊಂಬುದು–ತಿರಸ್ಕರಿಸುವುದು. ನನ್ನನ್ನು ಮುರಿವುದು. ಅಸಾಧ್ಯವಾದುದರಿಂದ ಅದೊಂದೇ ಕಾರಣದಿಂದ ವಾಯುವಿನ ಪ್ರಭಂಜನನಾಮಕ್ಕೆ ನಿಂದೆ ಉಂಟಾಗುವುದು. ಬಿರುದು–ಗರ್ವ, ಹೆಮ್ಮೆ (ಇಲ್ಲಿ ಅರ್ಥ). ಘನತೆ–ಶ್ರೇಷ್ಠತೆ.

10. ಕೋಪ+ಅಗ್ನಿ (ಬೆಂಕಿ)ಯನು+ಹೊತ್ತಿ+ಇಕ್ಕಿ; ಕೋಪವೆಂಬ ಬೆಂಕಿಯನ್ನು ಎಬ್ಬಿಸಿ. ಅಳುತನ-ಪರಾಕ್ರಮ. ಮೆರೆವನು–ತೋರುವನು. ತೀವ್ರಗತಿ–ಬಲವಾದ ಬೀಸಾಟ. ಸದುಳ–ಕ್ಷೇಮ. ನಾನ್+ಒಂದದೆ+ಇರೆ–ನಾನು ಮಾಡದಿದ್ದರೆ. ಚಲಿಸ–ಅಲ್ಲಾಡುವ. ಹೊದರಿಗೊಂಡ–ಹೊದರಾಗಿ ಬೆಳೆದ. ಪಲಾಶ+ಅವಳಿ–ಎಲೆಗಳ ಸಮೂಹ. ಇಳುಹಿ–ಇಳಿಸಿ. ತರಿದ....ಇರಲಿ,–ಕಡಿದ ಮರದಂತೆ (ಸಿದ್ಧಮಾಡಿಕೊಂಡಿ)ರಲು. ಜಂಝಾ+ಅನಿಲನು-ಬಿರುಗಾಳಿಯು. ನಾನು....ಕೊಂಡೆ–ನಾನು ನಿನ್ನನ್ನು ಮುರಿದು ಇದೇ ರೀತಿ ಬಾಡಿ ಬೀಳುವಂತೆ ಮಾಡುತ್ತಿದ್ದೆನು; ಆದರೆ ನನಗೆ ಮೊದಲೇ ನೀನೇ ನಿನ್ನನ್ನು ಹೀಗೆ ಮಾಡಿಕೊಂಡೆ. ದೃಷ್ಟ+ಎನಿಸಿದೆ–ದೃಷ್ಟಾಂತವಾದೆ.

## ಇಲಿ ಮತ್ತು ಬೆಕ್ಕುಗಳ ಕಥೆ.

11. ಸುಮನಃ+ಹರವು+ಇದು ಎಂಬ+ಇತಿಹಾಸವನು–ಬಹಳ ಮನೋಹರವಾದ ಕಥೆಯನ್ನು. ಆಖು–ಇಲಿ. ಬಿಡಾಲ–ಬೆಕ್ಕು. ಫಲಿತ+ಅಖ್ಯ+ಮೂಷಕ–ಫಲಿತ ಎಂಬ ಹೆಸರುಳ್ಳ ಇಲಿ. (ಮುಷ್–ಕದ್ದುಕೋ; ಕದ್ದುತಿನ್ನುವ ಪ್ರಾಣಿ, ಇಲಿ) ಮನುಜ–ಮನುಷ್ಯ. ಮಾರ್ಜಾಲ (ಇಲಿ ಹೆಗ್ಗಣ ಇಲ್ಲದಂತೆ ಮನೆಸಾರಿಸುವುದು) ಬೆಕ್ಕು. ನಿಕರ–ಸಮೂಹ. ಉರುಲ–ಬಲೆಯನ್ನು. ಇರಲು+ಇರಲು (ವೀಪ್ಸಾ

ಸಮಾಸ). ಗೂಗೆ(ತ್ಸ)ಘೂಕ. ನಕುಲ-ಮುಂಗುಸಿ. ಧೈರ್ಯಕೆಡದೆ. ಬಗೆದುಕಾರ್ಯವ-ಮುಂದಿನ ಕಾರ್ಯವನ್ನು ನಿಶ್ಚಯಿಸಿ. 12. ಹಗ್ಗ(ತ್ಸ)ಪ್ರಗ್ರಹ. ವೈರವಂ+ಉಳಿದು-ವೈರವನ್ನು ಬಿಟ್ಟು. ಅನುವ-ಅಭಿಪ್ರಾಯವನ್ನು. ದೆಸೆ (ತ್ಸ) ದಿಶಾ, ದಿಕ್ಕು. ಹೊಂಚುತ-ಕಾದುಕೊಂಡು. ಪಸರಿಸು(ತ್ಸ) ಪ್ರಸರಿಸು. ಆರಾಧಿಸಿ-ಪೂಜಿಸಿ. ಮುಸುಡ ತಿರುಹದೆ-ತಿರಸ್ಕರಿಸದೆ. ಶಿವಸಾಕ್ಷಿಯಾಗಿ-ಶಿವನ ಇದಿರಿಗೆ. ಸಾಕ್ಷಿ-ಕಣ್ಣುಗಳಿಂದ ನೋಡಿದುದು. ಬಂಧುತೆಯುನು ಬಳಸೆ-ಬಂಧುತ್ವವನ್ನು ಸಂಪಾದಿಸಲು. ಉಳಿವು-ಬದುಕುವಿಕೆ. ಅನ್+ಅಘ (ದೋಷವಿಲ್ಲದವನೆ!)

13. ನಿಃ+ಶಂಕೆ (-ಭಯ)-ನಿರ್ಭಯವಾಗಿ. ಒಂದುಕಣೆಯಕೆ-ಒಂದು ಬಾರಿಗೆ ಎರಡುಂ+ಈಪರಿ. ಮೇಗರೆಯಲೇ + ಹೊತ್ತು+ ಕಳೆವ + ಉದ್ಯೋಗ—ಮೇಲಿಂದ ಮೇಲೆ ಹೊತ್ತು ಕಳೆವ ಕೆಲಸ. ಕೃತ (ಮಾಡಿದ ಉಪಕಾರವನ್ನು)+ಘ್ನತೆ (ಕೆಡಿಸುವುದು)×ಕೃತಜ್ಞತೆ. ಕಲುಷಕೆ-ಪಾಪಕ್ಕೆ. ಬಳಸದೆ (ಇಲ್ಲಿ)-ಗುರಿಯಾಗದೆ. ನೆರೆ, ವರ, ಚಾರು, ಸಲೆ, ಮಿಗೆ, ಉರೆ ಇತ್ಯಾದಿಗಳು (ಚೆನ್ನಾಗಿ, ಹೆಚ್ಚಾಗಿ)-ಪಾದ ಪೂರ್ಣಗಳು.

14. ಲೇಸು-ಉಪಕಾರವನ್ನು. ತಿಳಿಯದವನೇ....ಮಾರ್ಗವನು-ತನ್ನನ್ನು ತಾನೆ ಕಾಪಾಡಿಕೊಳ್ಳಬೇಕೆಂಬ ನೀತಿಯನ್ನು ನೀನೂ ಬಲ್ಲೆ. ಭವತ್ (ನಿನ್ನ)+ ಪ್ರಾಣಗಳ (ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ-ಇವು ಐದು ಪ್ರಾಣಗಳು) ಸತ್+ಲಾಪ (ಸಂಭಾಷಣ). ಬೆಳ್ಳನೆ....ಆಯ್ತು-ಚೆನ್ನಾಗಿ ಬೆಳಕು ಹರಿಯಿತು. ಖಂಡೆಯ-ಕತ್ತಿ. ಜಳಪಿಸು-ಹೊಳೆವಂತೆ ಅಲ್ಲಾಡಿಸು. ಭಯ+ಆವಿಲನು (ಕಂಗೆಟ್ಟವನು). ಯಮಕಿಂಕರ-ಯಮನ ದೂತ.

15. ದಾರಗಳ್ ಅನಿತಂ-ಅಷ್ಟುದಾರಗಳನ್ನು. ಕಡಿದು ಕಿತ್ತಿತು-ಕಚ್ಚಿ ಕತ್ತರಿಸಿತು. ನಿಃ+ಫಲ, ಮನಃ+ರಥನು+ಆಗಿ+-ಅವನ ಬಯಕೆಯು ಕೈಗೂಡದೆ× ಸಫಲ....ನಯ-ನುಣುಪು, ಮೃದು. ಅರಿಗಳಿಬ್ಬರು-ಗೂಗೆ, ಮುಂಗುಸಿ ಇವು. ಸಖ-ಗೆಳೆಯ. ನಿನಗೆ....ನಿಸುವುದು-ನೀನು ಹೀಗೆ ಕರುಣೆಯಿಂದ ಮಾತಾಡುವುದು. ಮತ್ (ನನ್ನ)+ವಚನ (ಮಾತು).

16. ಅರಿದು-ಅಸಾಧ್ಯ. ಸೂಕ್ಷ್ಮತರ-ಅತಿ ಸೂಕ್ಷ್ಮವಾದುದು. ದುಃ(ದುಃಖದಿಂದ, ಕಷ್ಟದಿಂದ)+ಲಭವು-ಸಿಗುವಂಥದು; ಅಸಾಧ್ಯವಾದುದು. ಹಿತ×ಅಹಿತ. ಮಿತ್ರ×ಶತ್ರು. ಅನು(ತರುವಾಯ)+ಜ(ಹುಟ್ಟಿದವನು) ತಮ್ಮ. ತನು(ದೇಹದಿಂದ)+ ಜ-(ಹುಟ್ಟಿದವನು) ಮಗ. ಹಿತವರೆ-ಹಿತಮಾಡತಕ್ಕವರೇ? ಮನ್ನಣೆ (ತ್ಸ) ಮಾನ್ಯತಾ, ಉಪಚಾರ. ಪಾರಣೆ-ಉಪವಾಸದ ತರುವಾಯ ಮಾಡುವ ಊಟ. ಗಳಸ (-ಹ) ದೆ+ಇರು. ಮಾಯೆಗೆ-ವಂಚನೆಗೆ, ಮೋಸಕ್ಕೆ. ಶುಕ್ರನ-ಶುಕ್ರಾಚಾರ್ಯನೆಂಬ ದೈತ್ಯರ

ಗುರು ಬಲವತ್..............ಸುವಿವೇಕ–ಬಲವಂತನಾದ ಹಗೆಯು ಸ್ನೇಹದಿಂದ ತನ್ನ ಪ್ರಯೋಜನವು ತನಗೆ ಅನುಕೂಲವಾಗಿ ಕೈಗೂಡಿದ ಬಳಿಕ, ಆತನನ್ನು ಬಿಟ್ಟುಬಿಡುವುದು ಜಾಣರ ನಡತೆಯು. ಮಿಗೆ–ಮತ್ತೂ.

## ಕ ಪೋ ೀ ತಾ ಖ್ಯಾ ನ .

17. ಕಪೋತ (ಪಾರಿವಾಳದ)+ಆಖ್ಯಾನ–ಕಥೆ. ಯುಧಿ.+ಸ್ಥಿರ–ಯುದ್ಧದಲ್ಲಿ ಸ್ಥಿರನಾಗಿರುವವನು, ಧರ್ಮರಾಯನು. ದೇವ–ಪೂಜ್ಯರು. ಸ+ಅವಧಾನದಿ (ಲಕ್ಷ್ಯದಿಂದ) ವ್ಯಾಧ–ಬೇಡನು. ಇಳಾ+ವಲಯ–ಭೂಮಂಡಲ. ಪತ (ರೆಕ್ಕೆಗಳಿಂದ)+ಗ–ಚಲಿಸುವುದು, ಹಕ್ಕಿ. ನಿಖಿಲ–ಎಲ್ಲ. ಜಲಮಯ....ಧರೆಯನಿತು–ನೆಲವೆಲ್ಲ ನೀರಿನಿಂದ ತುಂಬಿಕೊಂಡಿತು. ತ್ರಿಯಾಮ–ರಾತ್ರಿ (ರಾತ್ರಿಗೆ ನಾಲ್ಕು ಯಾಮಗಳಿದ್ದರೂ ಮೊದಲನೆ ಮತ್ತು ಕೊನೆಯ ಜಾಮಗಳ ಅರ್ಧವು ಹಗಲಿಗೇ ಸೇರುವುದರಿಂದ ತ್ರಿಯಾಮವೆಂದು ರಾತ್ರಿಗೆ ಹೆಸರಾಯಿತು). ಯಾಮ (ದ್ಭ) ಜಾವ. ಹೊದರೆದ್ದ–ಒತ್ತೊತ್ತಾಗಿ ಬೆಳೆದ. ಉಗ್ರ (ಭಯಂಕರ)+ಅಟವಿ (ಕಾಡು) ದ್ಭ–ಅಡವಿ. ಶಯ್ಯೆ–ಹಾಸುಗೆ. ವಿಟಪಿ–ಮರ. ಭೂತ–(ಪ್ರಾಣಿ)+ಆವಳಿ (ಸಮೂಹ). ಮರೆ+ಪೊಕ್ಕೆ (ಕ್ರಿಯಾಸಮಾಸ) ಕೋಟರ–ಪೊಟ್ಟರೆ. ಪಾರಾವತ (ದ್ಭ) ಪಾರಿವಾಳ. ನಿಜ (ತನ್ನ)+ಪ್ರಿಯೆ (ಹೆಂಡತಿ) ಪೋಗಿ (ಆಹಾರಕ್ಕಾಗಿ). ಹಂಬಲಿಸು (ಗುಣಗಳನ್ನು ನೆನೆದು) ದುಃಖಿಸು. ಹಿರಿದು–ಹೆಚ್ಚು.

18. ಮೇಣ್–ಅಥವಾ (ಮತ್ತು). ಕ(ವಾಯುವಿನ)+ಪ್ರೋತ (ಮರಿಯಂತಿರುವದು) [ವೇಗದಲ್ಲಿ]. ಅರೆ–(ತ್ಸ) ಅರ್ಧ. ಗಳಿಗೆ (ತ್ಸ) ಘಟಿಕಾ. ವಲ್ಲಭೆ—ಪ್ರಿಯಳು. ಹರಣ (ತ್ಸ) ಪ್ರಾಣ. ಈಗಲೀ....ದಂತಿದೆ–ಪ್ರಿಯೆಯು ಇಲ್ಲದಿರುವುದರಿಂದ ಮನೆಯು–ಹಾಳುಬಿದ್ದಂತಿದೆ. ಇಹ....ಅವಳ್....ಇಹ ಪರಗಳ ಸುಖಕ್ಕೆ ಕಾರಣಳಾಗಿರುವ ಹೆಂಡತಿಯನ್ನು. ಇಹ–ಇಲ್ಲಿನ ಸಂಸಾರಸುಖ. ಆಕೆಯೊಡಗೂಡಿ ಧರ್ಮಕಾರ್ಯಗಳನ್ನು ಮಾಡಿದರೆ ಪರ (ಸ್ವರ್ಗ) ಸುಖವಿದೆ. ಹೆಂಡತಿಯಿಲ್ಲದವರು ಧರ್ಮಕಾರ್ಯಗಳನ್ನು ಮಾಡಬಾರದೆಂದು ಧರ್ಮಶಾಸ್ತ್ರವು. ಸಾಧ್ವಿ–ಪತಿವ್ರತೆ. ಚಿಂತಾಭರದಿ–ಚಿಂತೆಯ ಭಾರದಿಂದ. ನಿಜ+ಈಶ–ತನ್ನ ಗಂಡ, ಪತಿ. ತತ್+ವಿಹಗ (ವಿಹಸ್–ಆಕಾಶವನ್ನು+ಗ–ಚಲಿಸುವುದು)+ಸತಿ. ಆ ಹಕ್ಕಿಯ ಹೆಂಡತಿ; ಹೆಣ್ಣು ಹಕ್ಕಿ. ಲುಬ್ಧಕ ಬೇಡ (ಮೃಗಪಕ್ಷಿಗಳ ಮಾಂಸದಲ್ಲಿ ಆಶೆಯುಳ್ಳವನು.) ಸು+ಕೃತ–(ಒಳ್ಳೆಯ ಕೆಲಸ) ಪುಣ್ಯ. ಮನಃ+ಪ್ರಿಯ–ಮನಸ್ಸಿಗೆ ಪ್ರಿಯ ಪತಿ. ಜಂತು–ಪ್ರಾಣಿ ಸಮೂಹ. ಕಪೋತಿ–ಹೆಣ್ಣು ಕಪೋತವು.

19. ಮನುಜಭಾಷೆ–ಮನುಷ್ಯರ ಮಾತು. ಅನಘ–ಪೂಜ್ಯನೆ. ಮತ್+ಗೃಹಕೆ+ಅತಿಥಿ+ಅದೈ–ಅತಿಥಿ (ಅಟ್–ತಿರುಗು) ದಾರಿಹೋಕನಾಗಿ ಮನೆಗೆ ಬಂದ

ವನು, ಆತಿಥ್ಯ–ಅಂಥವನಿಗೆ ಸಲ್ಲತಕ್ಕ ಉಪಚಾರ. ನರತೆಗೆದು–ನರಗಳು ಶೀತದ ಬೆಸೆಯಿಂದ ಮರಕಟ್ಟಿದಂತಾಗಿ. ಶಕ್ಯವು....ರಚಿಸು–ಸಾಧ್ಯವಾದುದನ್ನು ಮಾಡು. ಶಬರ–ಬೇಡ. ಬೇಸಗೆ(ತ್ಭ)ವೈಶಾಖ. ಕಡ್ಡಿ(ತ್ಭ)ಕಾಷ್ಠ. ತೆಗೆದು–ತಂದು. ರಾಸಿ(ತ್ಭ)ರಾಶಿ. ಬೇಗ(ತ್ಭ)ವೇಗ. ಹಳ್ಳಿ(ತ್ಭ)ಪಲ್ಲಿ. ವಿಲಾಸ–ಉಲ್ಲಾಸ. ಕಾಸುವೆ–ಕಾಸಬಹುದು. ಖ(ಆಕಾಶದಲ್ಲಿ)+ಗ (ಚಲಿಸುವದು.) ಹಿಮವ+ಜಯಿಸಿದನು–ಹೋಗಲಾಡಿಸಿಕೊಂಡನು.

20. ಮೈತೆರೆಯಲು–ಮೈಬಿಚ್ಚಲು, ಬೆಚ್ಚಗಾಗಲು. ಜಠರದ(ಹೊಟ್ಟೆಯ) ವಹ್ನಿ(ಬೆಂಕಿ)–ಹಸಿವು. ಕಡುಮರುಗಿ–ಕಡಿದು+ಮರುಗಿ. ಪಾವಕ–ಬೆಂಕಿ. ಖಗ....ಗಳನು–ಹಕ್ಕಿಗಳನ್ನು ಹಿಡಿವ ಸಾಧನಗಳನ್ನು. ಪುಳಿಂದ, ಶಬರ, ಕಿರಾತ, ಬೇಡ. ಅಘ(ಪಾಪ)+ಸಂಕುಳ(ಸಮೂಹ). ಆಪನ್ನನು–ಪೀಡಿತನು. ಅಧಿಪತಿ–ಗಂಡ. ಚೆನ್ನಿಗ–ಸುಂದರ. ಗುಟುಕು–ಆಹಾರದ ತುತ್ತು. ಕಲ+ರವ–ಮನೋಹರ ಶಬ್ದ. ಮುದ್ದು(ತ್ಭ) ಮುಗ್ಧ–ಸುಂದರ. ತಿಳುಹು–ಸಮಾಧಾನಪಡಿಸು. ಅನಲಮುಖದಲಿ–ಬೆಂಕಿಯ ಮೇಲೆ. ದಂಪತಿ (ಜಾಯಾಪತಿ) ಗಂಡಹೆಂಡಿರು. ಸುರಲೋಕ–ಸ್ವರ್ಗ. ಅನಘಚರಿತೆ–ನಿರ್ದೋಷವಾದ ನಡತೆಯುಳ್ಳವಳು. ಹುತ(ಹೋಮಿಸಿದ ತುಪ್ಪ ಇತ್ಯಾದಿ+ವಹ ದೇವತೆಗಳಿಗಾಗಿ ಒಯ್ಯುವವನು.)–ಅಗ್ನಿ. ಹೊತ್ತಿ+ಇಕ್ಕಿ–ಎಬ್ಬಿಸಿ. ನನಗೆ....ಸಿದ್ಧಿಸಲಿ–ಗಂಡನಿರುವ ಸ್ಥಳವೇ ದೊರೆಯಲಿ. ಅಚ್ಚರಿ(ತ್ಭ)ಆಶ್ಚರ್ಯ. ಪತಗ ಯಜ್ಞದ ವರ್ತನವು–ಹಕ್ಕಿಗಳು ಈ ರೀತಿಯಾಗಿ ದೇಹವನ್ನರ್ಪಣೆಮಾಡಿ ದೇವತೆಗಳನ್ನು ತೃಪ್ತಿಪಡಿಸುವ ನಡತೆಯು. ತೋರಿತು ಮನದೊಳ್–ತಾನೂ ಹಾಗೆಯೆ ಮಾಡಬೇಕೆಂಬ ವಿಚಾರವನ್ನು ಅವನ ಮನಸ್ಸಿನಲ್ಲಿ ಮೂಡಿಸಿತು. ವೈರಾಗ್ಯ–ಸಂಸಾರದಲ್ಲಿ ಉಂಟಾಗುವ ಬೇಸರ. ಮೃತಿಯೇ ಸಿದ್ಧಿಸಲಿ–ಸಾವು ಬರಲಿ. ಅಮರ–(ಮರಣರಹಿತರ) ದೇವತೆಗಳ.

21. ಅನುಭವಾಮೃತ–(ಅಮೃತದಂತೆ ಸೊಗಸಾಗಿ ತಿಳುವಳಿಕೆಯನ್ನು ಹುಟ್ಟಿಸುವಂಥ ಗ್ರಂಥವು.) ಕಳಿದಸಿಗುರಿನ–ಸಿಪ್ಪೆತೆಗೆದ. ಅಳಿದ ಉಷ್ಣದ–ಕಾದು ತಣ್ಣಗಾದ. ಲಲಿತ–ಸುಲಭ(ಓದಲೂ ತಿಳಿಯಲೂ). ಕನ್ನಡ(ತ್ಭ)ಕರ್ಣಾಟಕ. ಮೋಕ್ಷ(ಮುಚ್–ಬಿಡು, ಸಂಸಾರಬಂಧನವನ್ನು) ಅಂದದಿ ಇತ್ಯಾದಿ ಮಾತುಗಳಿಂದ ಹೋಲಿಸಿ ಸೂಚಿಸಿರುವ ಉಪಮಾಲಂಕಾರವನ್ನು ನೋಡುವುದು. ಕತ್ತುರಿ(ತ್ಭ)ಕಸ್ತೂರಿ. ಬುತ್ತಿಕಳ್ಳನಿಗೆ ಸತ್ಯ ಮೊದಲಾದುವೇಕೆ? ಉಪದೇಶಿಸಿ ಉಪಯೋಗವಿರದು. ದತ್ತ–(ಇತರರಿಗೆ ಕೊಟ್ಟ) ಹುಡುಗನು. ಪರತತ್ವ–ಪರಮಾತ್ಮ–ನಲ್ಲಿ ಚಿಂತಿಸುವವರು ಮಾಲ್ಯಾದಿಗಳಲ್ಲಿ ಆಸಕ್ತಿಯನ್ನು ಬಿಡಬೇಕು.

22. ಲಿಂಗಮುದ್ರೆ–ಲಿಂಗದ ಆಕಾರದ ಮೊಹರು ಗುರುತು. ಸತ್ತವರಿಗಾಗಿ ಮಾಡುವ ವೃಷೋತ್ಸರ್ಗವೆಂಬ ಕರ್ಮದಲ್ಲಿ ಹೀಗೆ ಮುದ್ರೆಯನ್ನು ಗೂಳಿಗೆ ಒತ್ತುವರು.

ಬಸವ (ಶ್ವ) ವೃಷಭ. ತುತ್ತು (ಇತರರ) ತುತ್ತನ್ನು ಬಡಿವ-ಕಸುಕೊಳ್ಳುವವನಿಗೆ, ಬಾಯಿಹೊಡೆವನಿಗೆ ಆತ್ಮವಿಚಾರವೇಕೆ? ಕಾನನದ....ಇಹುದು-ಕಾಡಿನಲ್ಲಿ ಚಂದ್ರ ಕಿರಣಗಳು ಬಿದ್ದು ಉಪಯೋಗವೇನು? ತಾನು ಯಾರು, ಎಲ್ಲಿಂದ ಬಂದೆನು, ಎಲ್ಲಿಗೆ ಹೋಗುವೆನು, ಇತ್ಯಾದಿ ವಿಚಾರವೇ ಆತ್ಮವಿಚಾರ. ವಿಶೇಷವಾದ ಜ್ಞಾನವೇ ವಿಜ್ಞಾನ. ಮನುವಿನ ಸಂತತಿಯವನು-ಮಾನವನು. ಸೂಕರ (ಹಲವುಮರಿಗಳನ್ನು ಈಯುವುದು) ಹಂದಿ. ಗಜಬಜ ಶಬ್ದಮಾಡುವ. ಹೊಂದಿಕೊಂಡು, ಸೇರಿ. ಕಂಡ+ಎಡೆಗೆ, ಬೇಕಾದತ್ತ. ಒಂದು ನಿಮಿಷದಿ ತೋರಿ-ಒಂದು ಕಾಲದಲ್ಲಿ ಹುಟ್ಟಿ. ಋಣ-ಸಲ್ಲಬೇಕಾದುದು-(ಇಲ್ಲಿ-ತನ್ನಿಂದ ಇತರರಿಗೆ, ಇತರರಿಂದ ತನಗೆ ಸಲ್ಲಬೇಕಾದುದು). ತನ್ನ ತನ್ನಂದವನು-ಬೇಕಾದ ಕಡೆಗೆ ಇಷ್ಟಕ್ಕೆ ಬಂದಂತೆ. ಕಂದಕೇಳೈ-ವ್ಯಾಸಋಷಿಗಳು ಶುಕಯೋಗಿಗೆ ಹೇಳುವರು. ಸ್ವ×ಪರ-ತಂತ್ರ ವಾರ್ಧಕ-ಮುದುತನ. ಬಾಲ್ಯ, ಯೌವನ, ವಾರ್ಧಕ್ಯ-ಮೂರು ಅವಸ್ಥೆಗಳಲ್ಲಿಯೂ ಬೇರೆಯವರ ಆರೈಕೆಯಲ್ಲಿರುವ ತನುವು ಯಾರಿಗೆ ಸೇರಿದುದು? ಪರಕೆಗೆಂದೇ.... —ದೇವತೆಗೆ ಬಲಿಗುಡಲು ತಂದ ಕುರಿಯು ತನ್ನ ಮರಣವಿಷಯವಾಗಿ ತಿಳಿಯದೆ ಅಲ್ಲಿನ ತೋರಣಕ್ಕಾಗಿ ತಂದ ಎಳೆ ತಳಿರುಗಳನ್ನು ಮೆಲ್ಲುವಂತೆ, (ಕುರಿಗಳಂತೆ) ಮೂಢರಾದವರು ಇತ್ಯಾದಿ. ಸಂಸರಣ-ಸಂಸಾರ. ಮಗ್ನರಾಗಿ-ಮುಣುಗಿ. ಮೃತ್ಯು-ಮರಣ ದೇವತೆ. ದುಃಖದೆ-ದುಃಖದಿಂದ. ಸರ್ಪ....ಇಹ-ಸರ್ಪದ ಬಾಯಿಯಲ್ಲಿ ತುತ್ತಾಗಿ ಸಿಲ್ಕಿರುವ. ಮಕ್ಷಿಕ-ನೊಣ. ಕಾಲ-ಯಮನಿಗೆ ವಶ-ಸಾವಿಗೆ ಗುರಿಯಾದ. ದರ್ಪ-ಹೆಮ್ಮೆ. ಹೆಡತಲೆ-ತಲೆಯ ಹಿಂಭಾಗ. ಮೃತ್ಯುವು ಬೆನ್ನಿನಲ್ಲೇ ಇರುವುದು; ಮನುಷ್ಯನ ಅವಿವೇಕವನ್ನು ನೋಡಿ ನಗುವುದು.

23. ಅಡಸಿದರೆ-ಬಂದರೆ. ಕೆಡುವಕಾಲಕ್ಕೆ ಯಾರಿಗೆ ಯಾರೂ ಒದಗರು; ತನಗೆ ತಾನೇ [ಎರಡು ವಾಕ್ಯಗಳಲ್ಲಿ ಒಂದಕ್ಕೆ ಮತ್ತೊಂದು ಹೋಲುವುದು, ಅಥವಾ ಉದಾಹರಣ ಸ್ವರೂಪವಾಗಿರುವುದು; ಇದಕ್ಕೆ ದೃಷ್ಟಾಂತಾಲಂಕಾರವೆನ್ನುತ್ತಾರೆ.] ಮಾಯಾ (ಇಂದ್ರಜಾಲದಂತೆ ಅಡಗುವ) ಪ್ರಪಂಚದಿ-ಸಂಸಾರದಲ್ಲಿ. ಹೊರಳು-ಆಸಕ್ತನಾಗಿರು. ಪಾಮರ-ನೀಚ. ಭವ-ಸಂಸಾರ. ತೊಡಕು ಬಿಡದು-ಮೋಕ್ಷಸಿಗದು ಅ+ಗಾಧ-ನೆಲೆ ಇಲ್ಲದ. ಕೂಪ-ಹೊಂಡ. ಭವಮಾಲೆ-ಪರಂಪರೆ, ಬಹು ಜನ್ಮಗಳೆಂದರ್ಥ. ಮಂಡೆ ತುಂಬಿದ-ಹೆಚ್ಚು ತಲೆ (ಜನರು) ಚಂಡ-ಕ್ರೂರವಾದ. ಪಾಶ-ನೇಣು. ಖಳ-ದುಷ್ಟ. ಮಧುಘೃತ-ಜೇನುತುಪ್ಪ. ಖಡ್ಗಧಾರೆ-ಕತ್ತಿಯಬಾಯಿ. ವಿಷಯ-ಶಬ್ದ, ಸ್ಪರ್ಶ, ರೂಪ, ರಸ, ಗಂಧ. [ಇಲ್ಲಿನ ಉಪಮಾಲಂಕಾರ ವಿವರಿಸಿ ಬರೆ.] ಪ್ರ: ಮರ್ಕಟನು ಕೀಲುಚ್ಚಿದ ಕಥೆಯನ್ನು ಹೇಳುವುದು. ಈ ಗ್ರಂಥದ ಉದ್ದೇಶವೇನು?

24. **ಭಾಗವತ**–ಭಗವಂತನ ಅಥವಾ ಭಗವದ್ಭಕ್ತರ ಚರಿತ್ರೆ. ಕು(ಕುತ್ಸಿತ ವಾದ ಹೊಲಸಾದ (+ಚೇಲ–) ಬಟ್ಟೆಯುಳ್ಳವನು) ಬಹುವ್ರೀಹಿ ಸಮಾಸ. ಅವಧ ರಿಸು–ಕೇಳು. ಅ+ಚ್ಯುತ–ನಾಶವಿಲ್ಲದವ. ಪಾದಕಮಲ–ಪಾದವೆಂಬ ತಾವರೆಯ. ಪರಾಗ–ಧೂಳಿಯಲ್ಲಿ. ಭಕ್ತನು–ವಿಶ್ವಾಸವುಳ್ಳವನು. ವಿತ್ತಮು–ತಿಳಿದ. ಆತ್ಮ.... ವಿಭ್ರಮು–ಇಂದ್ರಿಯ ವ್ಯಾಪಾರಗಳನ್ನು ಗೆದ್ದವನು. ಸುಗುಣ (ಒಳ್ಳೆ ಗುಣಗಳಿಗೆ.) ನಿಳಯ–ಮನೆಯಾದವನು. ಮೇದಿನಿ (ಭೂಮಿ). ಸುರ–(ದೇವತೆಗಳಂತೆ ಪೂಜ್ಯನು) ಬ್ರಾಹ್ಮಣನು. ನಿಃ+ಕಿಂಚನ–ಏನೂ ಇಲ್ಲದವನು. ಪಾತಿವ್ರತ್ಯ (ವೆಂಬ) ಒಳ್ಳೆಯ ಗುಣಕ್ಕೆ (ವನಧಿ) ಸಮುದ್ರದಂತಿರುವವಳು. ಜೀರ್ಣ (ಹರುಕು)+ಅಂಬರೆ(ಸೀರೆಯು ಳ್ಳವಳು). ಕೃಶ (ಬಡಕಲಾದ)+ಅಂಗಿ (ಮೈಯುಳ್ಳವಳು) ತೃಷ್ಣಾ–ಆಸೆ, ಇದ್ದ ಸ್ಥಿತಿ ಯಲ್ಲಿ ತೃಪ್ತಿ ಇಲ್ಲದವಳು. ಪ್ರಥುಗಾತ್ರೆ–ತೋರವಾದ ಮೈಯುಳ್ಳವಳು. ಸಂಕಲ್ಪವಲ್ಲಿ (ದ್ವಿತೀಯಾರ್ಥದ ಸಪ್ತಮಿ.) ಆಲೋಚನೆಯನ್ನು. ಅಖಿಲ–ಎಲ್ಲವುಗಳಲ್ಲೂ+ಆತ್ಮಕ– ಆತ್ಮಸ್ವರೂಪದಿಂದಿರುವವನಾದ. ಅಭಿಧಾನ–ಹೆಸರು. ಸಖ–ಮಿತ್ರ. ಸರಃ+ಜ+ ಮುಖಿ–ತಾವರೆ ಮೊಗದವಳು. ಇಂದು–ಚಂದ್ರ. ತೃಷೆ–ನೀರಡಿಕೆ. ಅಂಪಲೆ– ಒತ್ತಾಯಮಾಡು. ಗಮನ–ಪ್ರಯಾಣ.

25. ಪರಮ **ಪುರುಷ**–ಪರಮಾತ್ಮ. ಧನ+ಆಗಮವು+ಆಗಲಿ–ಧನ ದೊರೆ ಯಲಿ. ನಿರತ–ನಿಶ್ಚಯವಾಗಿ. ಪಂಕ (ಕೆಸರು)+ರುಹ–ಹುಟ್ಟಿದುದು, ಕಮಲ. ಉಪ–(ದೊಡ್ಡವರ) ಸಮೀಪ ಹೋಗುವಾಗ;+ಅಯನ–ಒಯ್ಯುವುದು; ಅವನಿತೆ ನೆರೆಮನೆಗಳಲಿ ಪೃಥುಕತಂಡುಲವಧಾನ್ಯವನು, ಅವಲಕ್ಕಿ ಎಂಬ ಧಾನ್ಯವನ್ನು. ಮಲೀ ಮಸವು–ಕೊಳೆಯಾದ. ವಸ್ತ್ರಾಂಕದಲಿ–ವಸ್ತ್ರದ ಸೆರಗಿನಲ್ಲಿ. ಅನುಪಮಂಗೆ–ಎಣೆಯಿಲ್ಲ ವನಿಗೆ. ದ್ವಾರಾವತಿ–ಉತ್ತಮವಾದ ಬಾಗಿಲ್ಗಳುಳ್ಳುದು. ಗೋವಿಂದ....–ಕೃಷ್ಣನ ಪಾದಕಮಲಗಳಲ್ಲೆ ಮನಸ್ಸಿಟ್ಟು ಅವನ್ನೆ ಬಗೆ ಬಗೆಯಾಗಿ ಧ್ಯಾನಿಸುತ್ತ. ಸಂದ–ಕಳೆದ ಪರಿಶ್ರಮ–ಆಯಾಸ. ಸಂತೋಷ....–ಸಂತೋಷದಿಂದ ಮೈ ಬೆವರಿ ರೋಮವೆದ್ದು. ಪರವಶನಾಗುತ— ಮೈಮರೆದು. ಔತ್ಸುಕ್ಯ—ಆತುರತೆ. ಜಕ್ಕುಲಿಸ—ಎಳೆಯುವ. ಮೃದುಗತಿಯ–ಮೆಲ್ನಡೆಯಿಂದ. ಕಿರು ...ಒಡಲಿನ—ಭಯಾಶ್ಚರ್ಯಗಳಿಂದ ತುಸು ಬೆವರು ಹೊರಡುವ ದೇಹದಿಂದಲೂ, ಸುತ್ತಲೂ ತಿರುಗುವ ಕಣ್ಣುಗಳಿಂದಲೂ.

26. ಅವಧೂತ–ಋಷಿ(ಯಂತಿರುವ ಬ್ರಾಹ್ಮಣ). ನಿಗರ್ವಿತನು+ಗರ್ವವಿಲ್ಲದ ವನು. ಶ್ರೀ(ಲಕ್ಷ್ಮಿಯೆಂಬ) ವಧೂ (ಹೆಂಡತಿಯನ್ನು) ವಕ್ಷಸ್ಥಳನು (ಎದೆಯಲ್ಲಿ ಧರಿಸಿ ದವನು) ಸಂಭಾವಿಸಿದನು (ಮರ್ಯಾದೆಯಿಂದ) ಉಪಚರಿಸಿದನು. ಧನ್ಯ–ಪುಣ್ಯವಂತ. ರಿಕ್ತ–ಬರೀ+ಹಸ್ತದಲಿ–ಕೈಯಲ್ಲಿ. ತುಚ್ಛವು+ಎನ್ನನು (ಚತುರ್ಥ್ಯರ್ಥದ ದ್ವಿತೀಯೆ) ಒಲಿದು–ಮನಃಪೂರ್ವಕವಾಗಿ. ಪೊನ್ನ(ತ್ಸ)ಸೊನ್ನೆ. ಅದಕ್ಕೆ, ಭೋಕ್ತೃ–ಉಣ್ಣುವವನು

ನಾನಲ್ಲ. ಪರಿತುಷ್ಟನು–ತೃಪ್ತಿಗೊಳ್ಳುವವನು. ಅಡಸಿಕೊಂಡು-ಹಿಡಿದುಕೊಂಡು. ಕೈಕುತ್ತಿ–ಕೈಹಾಕಿ. ಆನಂದ(ದ)ಸಿಧಿ (ಸಮೂಹನು) ಚಾಪಲ–ತ್ವರೆ. ಆತ್ಮತುಷ್ಟನು–ಬೇರೊಂದರ ಅಪೇಕ್ಷೆಯಿಲ್ಲದೆ ತನ್ನಲ್ಲೆ ತೃಪ್ತಿಹೊಂದಿದವನು. (ಕೃಷ್ಣನು ಅವನಿಂದ ಅವಲಕ್ಕಿಯನ್ನು ಮೆಲ್ಲುವಾಗ ಅವನುಂಡ ಒಂದು ಮುಷ್ಟಿಯು ಲೋಕದುರ್ಲಭವಾದ ಸಂಪತ್ತನ್ನು ಕುಚೇಲನಿಗೆ ಕೊಡುವುದು. ಇನ್ನೂ ತಿಂದಲ್ಲಿ ತನ್ನನ್ನು ಅವನಿಗೆ ಮಾರಬೇಕಾಗುವುದೆಂದು ಬೆದರಿ ಲಕ್ಷ್ಮಿಯು ಕೃಷ್ಣನನ್ನು ತಡೆದಳು.

27. ಉರಿಯಿಸಿದೆ—ಪೀಡಿಸಿದೆ. ಎರವಿಗನೆ—ಅನ್ಯನೆ? [ಲಕ್ಷ್ಮಿಯೆ, ನೀನು ನನಗೆ ನಿಜವಾದ ಹೆಂಡತಿಯಾಗಿದ್ದಲ್ಲಿ ನನ್ನ ಭಕ್ತನಿಗೆ ಇಂತಹ ಬಡತನವುಂಟಾಗುತಿರಲಿಲ್ಲ]. ಮನದ....ನುಡಿದನು–ಲಕ್ಷ್ಮಿಯು ಕುಚೇಲನಿಗೆ ಒಲಿದುದಕ್ಕೆ ಮನಸ್ಸಿನಲ್ಲಿ ಆನಂದವಾದರೂ ಬಾಯಿಯಲ್ಲಿ ಸಿಟ್ಟುಗೊಂಡಂತೆ ಮಾತಾಡಿದನು. ಭಕುತ, ಹರುಷ (ತ್ಸ?) ಗರುವ (ತ್ಸ) ಗೌರವ, ಪೂಜ್ಯನಾದ. ಸುರಪತಿಯ (ಇಂದ್ರನ)+ಭವನಕೆ (ಮನೆಗೆ). ಭೋಗವತಿ—ಪಾತಾಳದಲ್ಲಿರುವ ಸರ್ಪರಾಜ ವಾಸುಕಿಯ ರಾಜಧಾನಿ. ತೂಗು-ಹೋಲಿಸು. ಶತ....ಸಮೃದ್ಧವು–ನೂರುಪಾಲಿಗೆ ಸಂಪತ್ತುಳ್ಳದ್ದು. ಭೋಗಸಾಧನ–ಸುಖಕ್ಕೆ ಕಾರಣವಾದ. ಯೋಗನಿಧಿ-ಬಹುತಪಸ್ವಿಯಾದ ಕುಚೇಲನು. ಅತಿಶಯ....ದಲಿ–ಮನಸ್ಸಿನಲ್ಲಿ ಹೆಚ್ಚಿನ ವಿಶ್ವಾಸದಿಂದ. ಎತ್ತಲಾ....ಅವಲಕ್ಕಿ–ಲೋಕವನ್ನು ಸೃಷ್ಟಿಸಿ ಕಾಪಾಡುವ ತನ್ನ ಯೋಗ್ಯತೆ ಎಲ್ಲಿ, ತಾನು ಕೊಟ್ಟ ಅವಲಕ್ಕಿ ಎಲ್ಲಿ (ಯೋಗ್ಯತೆಗೆ ಸರಿಯಾಗದ ಕಾಣಿಕೆ ಸಂದಂತಾಯಿತು) ಮಹಾ+ಉತ್ತರವ....—ಬಹಳ ಹೆಚ್ಚಾಗಿ ಕೊಡುವವನು. ತಾನು ಭಕ್ತರಿಗೆ ಕೊಟ್ಟುದು ಬಹು ಕಡಮೆಯೆಂದು ಯಾವಾಗಲೂ ಹೇಳುವನು. (ಕೊನೆಯ ಚರಣ) ತತ್—ಆ ಕೃಷ್ಣನ. ವಿಸ್ತರಿಸು—ವಿವರವಾಗಿ ಹೇಳು. ಕೀರ್ತಿಸು–ಹೊಗಳು. ಕಥಾ+ಅಮೃತ. ವೈಷ್ಣವ–ವಿಷ್ಣುಭಕ್ತ. ಸಂಗಸುಖ—ಸಹವಾಸದ ಸುಖ.

## ಕೃಷ್ಣಾವತಾರ ಕಥೆ.

28. ಈ....ವೇಷ—ನಡೆದಾಡುವ ಮನುಷ್ಯರೂಪವುಳ್ಳ (ವಸುದೇವನು ಹಿಂದೆ ದೇವತೆಯಾಗಿದ್ದುದರಿಂದ) ದೇವಕನು ಉಗ್ರಸೇನರಾಜನ ತಮ್ಮನು. ವತಿಕರಿಸಿದನು ವೈವಾಹಿಕದಲಿ–ವಿವಾಹದ ಮೂಲಕ ವರಿಸಿದನು. ಉರವಣಿಸಿ–ಸಿದ್ಧನಾಗಿ. ವರವಧುಗಳ್—ಮದುಮಕ್ಕಳು. ಭರದಲಿ+ಅದ್ದುದು+ಗಗನ—ಅತಿಶಯದಿಂದ ಆಕಾಶವು ಮರೆಯಾಯಿತು. ಒಯ್ಯಾರಿಸಲು-ಹೊಗಳಲು. ಮುರ(ಚರ್ಮದ ಮುಚ್ಚಳಗಳಿಂದ+ಜ+(ಉಂಟಾದ)-ಮದ್ದಳೆ. ಛಡಾಳಿಸು-ಹರಡು. ಕಂಸನನಾಮನು–ಕಂಸನೆಂದು ಹೆಸರುಳ್ಳವನು (ಉಗ್ರಸೇನನ ಮಗನು). ಮನ್ನಿಸು–ಗೌರವಿಸು. ವಾಘೆ–ಕಡಿವಾಣ. ಎಸಗು-ನಡೆಸು. ಮೊಳಗು–ಗುಡುಗು. ವಿಭವ–ಸಂಭ್ರಮ. ವಿರಾಮವಾಗು–ತಡೆ,

ನಿಂತುಹೋಗು. ನಭಃ+ನಿನದ—ಆಕಾಶವಾಣಿ. ಖೂಳರ+ತಿಲಕ—ಮೂರ್ಖರಲ್ಲಿ ಶ್ರೇಷ್ಠ. ತಂಗಿಯ....ಮೋಹವು–ತಂಗಿಯನ್ನು ಪ್ರೀತಿಸುವುದು ಕಾಡ್ಗಿಚ್ಚನ್ನು ಪ್ರೀತಿಸಿದಂತೆ ವಿನಾಶಕ್ಕೆ ಕಾರಣವು. ನಳಿನನಾಭನು–ತಾವರೆಯಾಕಾರದ ಹೊಕ್ಕುಳುಳ್ಳ ವಿಷ್ಣುವು. ಘನರಭಸ–ದೊಡ್ಡ ಶಬ್ದ.

29. ಮಂಗಳ–ಶುಭಕಾರ್ಯ. ಬೆಳಗೈ–ಬೆಳೆದ ಕೈಯಮೇಲೆ. ಇಂಗಳ–ಕೆಂಡ. ಅಂಗ—ದೇಹ. ತಂಗಿಯೋ....ಸಿಂಗಿಯೋ–ತಂಗಿಯಲ್ಲ, ತನ್ನನ್ನು ಕೊಲ್ಲುವ ವಿಷಮೂಲಿಕೆಯು. ಝಡಿವುತ–ಜಳಪಿಸುತ್ತ. ಮುಂದಲೆ (ತಲೆಯ ಮುಂದು). ಕೋಪವಶನಾಗಿ ಹೀಗೆ ಆತುರದಿಂದ ಮಾಡಿದನು. ಹಲಗೆ (ತ್ಸ) ಫಲಕ. ಕೆಡೆ (ಯುವಂತೆ) ಒಡೆದು. ಕೂರಸಿ–ಕೂರಿತು+ಅಸಿ, ಹರಿತವಾದ ಕತ್ತಿ. ಮೋಹುತ–ಗುರಿನೋಡುತ್ತ. ನಿರೋಧಸ್ಥಿತಿ–ದುಃಖಸ್ಥಿತಿಗೆ. ಅಡ್ಡನಿಸು–ಅಡ್ಡಬರು. ಕೈ+ಒಡ್ಡಿ. ವಿಮಳ–ಹೆಚ್ಚಿನ. ಸಾರು–ದೂರಹೋಗು. ಭಾರವಣೆ–ಸಂಭ್ರಮ. ಹೆಂಗೊಲೆ–ಹೆಣ್ಣಿನ+ಕೊಲೆ, ಸ್ತ್ರೀಹತ್ಯೆ. ಮೈಸಿರಿ–ದೇಹಾಲಂಕಾರ. ಪಾರಿಬರುಹ (ತ್ಸ) ಪಾರಿಬರ್ಹ, ಬಳುವಳಿ. ಖಡುಗ (ತ್ಸ) ಖಡ್ಗ. ಮೈಯಲ್ಲಿ ಬೆವರು ಸುರಿಯುತ್ತಾ ಕೊರಲು ನಡುಗುತ್ತಿದೆ. ವಿರಚನೆ–ಕಾರ್ಯ. ವೈಪರೀತ್ಯ–ದುಷ್ಕಾರ್ಯ.

30. ತಲ್ಲಣಿಸು–ಹೆದರು. ಹೋ–ತಡೆ. ಮಾಣು–ಬಿಡು. ಮುಳ್ಳು ಕಾಲಲ್ಲಿ ಮುರಿದರೆ, ಅದನ್ನೆ ಕೀಳದೆ ಅದಕ್ಕೆ ಆಧಾರವಾಗಿದ್ದ ಹುಲ್ಲನ್ನು ಸುಡುವುದರಿಂದೇನು ಲಾಭವು? ನಾಲ್ಕು ಉಪಾಯಗಳು–ಸಾಮ, ದಾನ, ದಂಡ, ಭೇದ. ಬೆಚ್ಚನೆ+ಸುಯ್ಯು–ಬಿಸುಸುಯ್ಯು. ಉಮ್ಮಳ (ತ್ಸ) ಊಷ್ಮಳ; ದುಃಖ. ಉದುಭವಿಸು (ತ್ಸ) ಉದ್ಭವಿಸು, ಹುಟ್ಟು. ನೃಪವನ(ಕ್ಕೆ)ಹಿಮಾಂಶು(ಶೀತಕಿರಣನಾದ)ಚಂದ್ರನಂತಿರುವವನೆ. ಎಡೆ–ಗುರಿ. ಅನುನಯ–ನೀತಿ. ಅರಮನೆ–(ರಾಜಾಲಯ). ಕಾಲಾಂತರಕೆ–ಕೆಲಕಾಲದ ಮೇಲೆ. ದಂಡಕ್ಕೆ....–ಅನ್ಯಾಯವಾಗಿ ಇತರರಿಗೆ ಕೊಡುವುದಕ್ಕೆ ಹಣವನ್ನು ದುಡಿಯುವಂತೆ. ಪಾವಕ (ಅಗ್ನಿ)+ಉಪಮರ(ಸಮಾನರನ್ನು) ಬಹಳ ತೇಜಸ್ಸುಳ್ಳವರನ್ನು.

31. ಕಾಲ (ಯಮ) ನಪುರಕೆಸಲಲು–ಕೊಲ್ಲಲ್ಪಡಲು. ಹರುಷ (ಮಗುವು ಹುಟ್ಟುವುದೆಂಬುದರಿಂದ)ಶೋಕ(ಹುಟ್ಟಿದೊಡನೆ ಅದನ್ನು ಕಂಸನಿಗೊಪ್ಪಿಸಬೇಕೆಂಬುದರಿಂದ). ಪ್ರಚವು–ಕಾರಣವಾಗುವಂಥದು. ಶೇಷ (ಪ್ರಳಯವಲ್ಲಾದರೂ ನಾಶವಾಗದೆ ಉಳಿಯುವವ) ಅನ್+ಅಂತ (ಕೊನೆ) ವಿಷ್ಣುವು. ಎಲ್ಲರಲ್ಲಿಯೂ ಆತ್ಮಸ್ವರೂಪದಿಂದ ಇರುವವನು ಸಕಲಾತ್ಮಕನು. ಸಕತಿ(ತ್ಸ)ಶಕ್ತಿ. ಚಕಿತ–(ಕಂಸನ ದೆಸೆಯಿಂದ)ಹೆದರಿದ. ರೋಹಿಣಿ–ವಸುದೇವನು ದೇವಕಿಯನ್ನು ವರಿಸುವ ಮೊದಲು ವರಿಸಿದ್ದ ಹೆಂಡತಿ. ಇವಳು ಕಂಸನಿಗೆ ಬೆದರಿ, ನಂದನೆಂಬ ಗೋಕುಲದ ವಸುದೇವ ಮಿತ್ರನಲ್ಲೇ ಇರುತಿದ್ದಳು. ದೇವದೇವನ–ದೇವಾಧಿದೇವನಿಗೂ ಪೂಜ್ಯನಾದ ವಿಷ್ಣು. ಬೆಸನ–ಅಪ್ಪಣೆ. ಮೂಸವಳಸು

ವಂದೇ—ಮೂರುಸುತ್ತು ಬಂದೇ. ಹಸಾದ(ತ್ಸ)ಪ್ರಸಾದ. ನೋವದೆ—ನೋವಾಗದಂತೆ. ಆಳ್ವರು? ಅಚಿರ(ಬಹುಕಾಲವಿಲ್ಲದ)+ದ್ಯುತಿ(ಕಾಂತಿ)—ಮಿಂಚು. ಜಡಹೃದಯ—ತಿಳುವಳಿಕೆಯಿಲ್ಲದ ಮನಸ್ಸು. ವೇದಸರಸ್ವತಿ—ವೇದವಿದ್ಯೆ. ಒಡಲಮರೆವ—ದೇಹಾಭಿಮಾನವಿಲ್ಲದವ್ಮೃಡ (ಶಿವ)+ಸಖ(ಮಿತ್ರ) ವಿಷ್ಣು. ಉಪಮಾಲಂಕಾರವಿದೆ.

32. ಪುಣ್ಯಗ್ರಹಗಳಾದ ಬೃಹಸ್ಪತಿ ಮೊದಲಾದುವುಗಳ ಗುಂಪು—ಮಂಗಳ ಮಹಾಳಗ್ನಮುಹೂರ್ತದಲ್ಲಿ—ಶ್ರವಣ ನಕ್ಷತ್ರದಿಂದ ಕೂಡಿದ ಹುಣ್ಣಿಮೆಯುಳ್ಳ ಶ್ರಾವಣಮಾಸದಲ್ಲಿ—ಬಂಧುರ(ಒಳ್ಳೆಗುಣ)—ಅಂಬರ—ಆಕಾಶ. ಅರಳು—ವಿಸ್ತಾರವಾದ. ಸುಪ್ರಸನ್ನ+ಅಂಬುರುಹ+ವದನ—ಅರಳಿದ ಪದ್ಮಹೋಲುವ ಮುಖವುಳ್ಳ. ವಿಮಲ....ದೀಪ್ತಿಯು—ಸ್ವಚ್ಛವಾದ ತುದಿಮೊನೆಯುಳ್ಳ ಕಾಂತಿಯು. ಪವಳ (ಪ್ರವಾಳ)+ದ್ಯುತಿಯು—ಹವಳದ ಬಳ್ಳಿಯಂತೆ ಕೆಂಪಾದ ತುಟಿಯುಳ್ಳ ಕಾಂತಿಯು. ಕಟಾಕ್ಷ—ಕಡೆಗಣ್ಣು. ಸಿರಿಮೊಗ (ತ್ಸ)ಶ್ರೀಮುಖ; ಸರ್ವ ಅಂಗಗಳಲ್ಲಿಯೂ ಸುಂದರನಾದ. ಖಳ—ದುಷ್ಟ. ವ್ಯೆ+ತೋರಿದೆ—ಹುಟ್ಟಿದೆ. ಭಕ್ತ....ಜಲಧಿ—ಭಕ್ತರ ಮೇಲಿನ ಕರುಣೆಯು ಸಮುದ್ರದಂತಿರುವವನೇ ವತ್ಸಲನೆ—ಪ್ರೇಮವುಳ್ಳವನೆ. ಭಕ್ತರಿಗೆ ಅಧೀನ (ವಿಧೇಯನಾಗಿರುವ) ವೃತ್ತಿ—ವ್ಯವಹಾರವುಳ್ಳವನೇ. ಜಯ—ಸರ್ವೋತ್ಕೃಷ್ಟನಾಗು! ನಮಃ—ನಮಸ್ಕಾರವು. ಪಡೆಯಲು—ಹೊಂದಲು. ಭಾವರಸ....—ಸಾತ್ವಿಕ ಭಾವವೆಂಬ ಮನಸ್ಸಿನ ಅವಸ್ಥೆಯಿಂದ ಉಂಟಾದ ರೋಮಾಂಚದಿಂದ. ಓವಿ—ವಿಶ್ವಾಸವಿದ್ದು. ತದ್ಗತಭಾವದಲಿ—ಅವನಲ್ಲೇ ಇದ್ದ ವಿಶ್ವಾಸದಿಂದ.

33. ಉದರ—ಹೊಟ್ಟೆ. ಅಂತರದಲಿ—ಒಳಗೆ. ಬ್ರಹ್ಮನು ಮೊದಲಾಗಿ ನೀರನ್ನು ಸೃಷ್ಟಿಸಿ, ಅದರಲ್ಲಿ ತನ್ನ ತೇಜಸ್ಸನ್ನು ತುಂಬಲು ಆಗ ಒಂದು ಮೊಟ್ಟೆ ಉಂಟಾಯಿತೆಂದೂ, ಅದರೊಳಗೆ ಬ್ರಹ್ಮನು ಸೇರಿಕೊಂಡು ಜಗತ್ತನ್ನು ಉಂಟುಮಾಡಿದನೆಂದೂ, ಪುರಾಣವಚನವಿದೆ. (ಬ್ರಹ್ಮಾಂಡ). ನಿಖಿಳ..ಮಹಿಮನೆ—ವಿಶೇಷವಾದ ಮಾಯಾಶಕ್ತಿಯ ಬಲದಿಂದ ಎಣಿಸಕೂಡದ ಮಹಿಮೆಯುಳ್ಳವನೆ. ನಿತ್ಯವೂ ಆತ್ಮಸ್ವರೂಪದಲ್ಲಿರುವವನು. ಗೋಪ—ಗೊಲ್ಲ. ತರುಣಿ—ಹೆಂಡತಿ. ಇಂದುಮುಖಿ—ಚಂದ್ರನಂತೆ ಮುಖವುಳ್ಳ ಸುಂದರಿ. ಅಗ್ರ (ಮೊದಲು) +ಜ (ಹುಟ್ಟಿದವನು) ಅಣ್ಣನು. ಈಕ್ಷಿಸು—ನೋಡು. ದನುಜ (ರಕ್ಕಸರನ್ನು) ಹರ (ಕೊಂದವನು)—ವಿಷ್ಣುವು. ನರಶಿಶುತನವನು+ಅಂತನು—ಮನುಷ್ಯರ ಕೂಸುಗಳಂತೆಯೇ ಆದನು, ಅನುವು—ಉಪಾಯವು. ಕಾಲಲಿ ಇಕ್ಕಿದು(ಹಾಕಿ) ಬಿಗಿದ—ಬಿಗಿದಿರುವ. ಸಂಕಲೆ (ತ್ಸ) ಶೃಂಖಲಾ. ಬೀಳುಕೊಂಡುದು—ಕಳಚಿಬಿತ್ತು. ತೆತ್ಪುರ (ಮಧುರೆ) ರಕ್ಷಕ—ಪಾಲಕ. ಪರವಶರು+ಆದರು—ಮೈಮರೆತರು. ತೋರಣ—ಹೊರಬಾಗಿಲು. ಹೇರಾಳ—ಹೆಚ್ಚಿನ. ಕವಾಟು (ಕಪಾಟು). ಬಾಗಿಲು. ಆಲವಂಡಿಗೆ—

ದೊಡ್ಡ ಅಗುಳಿ; ಅಗುಳಿ-ಬಾಗಿಲ ತಾಳ. ಸಂಕಲೆ-ಚಿಲುಕ. ಕಳೆ-ಕಿಳಚು. ಸುಸರವು-ಸುಲಭವಾಗಿ ನಡೆಯುಲಾಗುವಂಥದು.

34. ಉರ-ಎದೆ. ಅಷ್ಟಸಿದ್ಧಿಗಳು:[ ಅಣಿಮಾ-ಸೂಕ್ಷ್ಮವಾಗುವುದು; ಮಹಿಮಾ-ದೊಡ್ಡದಾಗುವುದು; ಗರಿಮಾ-ಬೆಟ್ಟದಂತೆ ಭಾರವಾಗಿರುವುದು. ಪ್ರಾಪ್ತಿ-ಬೇಕಾದುದನ್ನು ಪಡೆವುದು; ಪ್ರಕಾಮ್ಯ-ಬೇಕಾದೆಡೆಗೆ ಹೋಗುವುದು. ಈಶತ್ವ-ಸರ್ವವನ್ನು ಸ್ವಾಧೀನಪಡಿಸಿಕೊಳ್ಳುವುದು. ವಶಿತ್ವ-ಇಂದ್ರಿಯಗಳನ್ನು ಜಯಿಸುವುದು]. ಅಂತು-ಅಪ್ಪಿಕೊಂಡು. ಇದಿರು ಅರಿಯದೆ-ಏನಿರುವುದೆಂದು ತಿಳಿಯದೆ. ಮುಗ್ಗುರಿಸಿ,-ಮುಂದಡಿಯಿಡುವುದು ಅಸಾಧ್ಯವಾಗಿರಲು. ಭಾಸುರ....ಎನಲು-ಪ್ರಕಾಶವಾದ ಥಳಥಳಿಸುವ ಸಾವಿರ ಹೆಡೆಗಳನ್ನೂ. ಕೊಡೆಗಳಂತೆ ಹಿಡಿದು ಎತ್ತಲು ವಿಲಾಸದಲಿ-ಸಾಲಾಗಿ. [ಒಂದೊಂದು ಹೆಡೆಯಲ್ಲಿ ಒಂದೊಂದು ಮಣಿ; ಅದರ ಪ್ರಕಾಶ ಬೆಳಗಿತು] ನೃಪ-ಪರೀಕ್ಷಿತನೇ ಎಂದು ಶುಕಯೋಗಿ ಹೇಳಿದನು. ಮುಮ್ಮಾರ್ಗ(ಮಾರ್ಗದ ಮುಂದು). ಹೆಗ್ಗಡಲು (ಹಿರಿದು ಕಡಲು) ಮುಸಗಿ-ತುಂಬಿ. ಉಲ್ಲೋಲ-ದೊಡ್ಡ ತೆರೆಗಳಿಂದ. ಇರ್ತಡಿ (ತ್ಸ ತಟಿ). ಅಲೆವುತ್ತ-ಕೊಚ್ಚಿಕೊಂಡು ಭೋರೆಂದು ಶಬ್ದ ಮಾಡುತ್ತ.

35. ಹೋಗುತ-ನದಿಗೆ ಇಳಿಯುತ್ತ. [ಆರ್ಯಮತೋಪಾಖ್ಯಾನದಲ್ಲಿನ ಸೇತು ಕಟ್ಟಿದ ಕಥೆಯನ್ನು ನೋಡುವುದು] ರಾಮನು ಲಂಕೆಗೆ ಹೋಗಲು ಸೇತುಕಟ್ಟುವಾಗ ಸಮುದ್ರರಾಜನು ದಾರಿಬಿಡಲು ಒಪ್ಪದಿರಲು, ಕೊನೆಗೆ ರಾಮಬಾಣಕ್ಕೆ ಬೆದರಿ ನೀರು ಇಬ್ಭಾಗವಾಗಿ ನಿಲ್ಲುವಂತೆ ಸಮುಪ್ರನೆ ಮಾಡಿಕೊಟ್ಟನು. ಯಮುನೆಯು ಸೂರ್ಯಪತ್ನಿಯಾಗಿರುವ ಛಾಯೆಯಲ್ಲಿ ಹುಟ್ಟಿದವಳು. ಇರ್ದೆಸೆ (ದಿಕ್ಕು)-ದಿಶಾ ಅಬ್ಧಿ. ಅರವಿಂದ (ತಾವರೆ). ಸಖ (ಮಿತ್ರ). ಸೂರ್ಯನ ಸುತೆ-ಮಗಳು, ಯಮುನೆ. ಉತ್ತರಿಸಿ (ದಾಟಿ). ನಟ್ಟಿರುಳು (ನಡು+ಇರುಳು). ಚಿತ್ತ (ಮನಸ್ಸನ್ನು)+ಸಾಕ್ಷಿ(ಕಾಣುವವನು) ಮನಸ್ಸಿನಲ್ಲಿ ಯೋಚಿಸಿದುದನ್ನು ತಿಳಿಯುವವನು. ನಂದಗೋಪಿ-ನಂದನ ಹೆಂಡತಿಯಾದ ಯಶೋದೆ. ಜೋಯಿಸ (ತ್ಸ) ಜ್ಯೋತಿಷ್ಕ; ಭವಿಷ್ಯವನ್ನು ಹೇಳುವವ. ಪರಿಜನ-ಸುತ್ತಲೂ ಇರುವ ಜನ. ವೃಂದ-ಸಮೂಹ. ವಿಪ್ರ-ಬ್ರಾಹ್ಮಣ. ತಂಪಿನಲಿ-ತಂಪಾಗಿಯೂ. ಕಂಪು-ಪರಿಮಳ. ತಂಬೆಲರ್ (ತಣ್ಣತು+ಎಲರ್) ತಂಗಾಳಿ ಇಂಪು+ಪಡೆದು-ಮನೋಹರವಾಗಿ. ತಳಿರ್ಗಳ....ದುರ್ಧರವಾಯ್ತು-ಚಿಗುರಗಳೊಡನೆ ಅಲ್ಲಾಡುತ್ತಿರುವ ಮರಗಳಲ್ಲಿನ ಹೂಗಳ ಪರಿಮಳದಿಂದ ತುಂಬಿದ ದಿಕ್ಕುಗಳ ಮೂಲೆಯ ಮಾಧುರ್ಯವು ಅತಿಶಯವಾಯಿತು. ಬಿಂಪು(ಬಿಣ್ಪು)-ಭಾರವು. ಬೀತುದು-ತಗ್ಗಿತು. ಸೊಂಪುಸೈ+ಬೆಳಗಿತ್ತು-ಸೌಂದರ್ಯವು ಹೆಚ್ಚಿತು. ಮಹಾಪುರುಷರು ಹುಟ್ಟಿದಾಗ ಆಗುವ ಶುಭಶಕುನಗಳು.

## ಧ್ರುವ ಚರಿತ್ರೆ.

35. **ಪೊಡವಿ** (ಪ್ರಥಿವಿ) ಮೇಳ—ಜತೆ. ಕಣ್ + ಪನಿ + ತುಂಬಿ—ಕಣ್ಣೀರ್ಮಿಡಿದು. ಉಪೇಕ್ಷೆ–ತಿರಸ್ಕಾರ. ಲಲನೆ–ಸೊಗಸುಗಾತಿ,(ಸುರುಚಿ). ಹೂಪೆ–ಅಲ್ಪನೆ ಕಂಠೀರವ, ಪುರುಷ, ವ್ಯಾಘ್ರ, ವೃಷಭ, ಸಿಂಹ, ಪುಂಗವ, ರತ್ನ ಮೊದಲಾದುವು ಶ್ರೇಷ್ಠಾರ್ಥವನ್ನು ಸೂಚಿಸುತ್ತಿವೆ. ಸೌಭಾಗ್ಯ–ಪುಣ್ಯ, ಅದೃಷ್ಟ. ಮನೋವ್ಯಥೆಯು ವ್ಯರ್ಥವು. ನಿದಾನ–ಮೂಲಕಾರಣ. ಓಲಗಿಸು–ಸೇವಿಸು. ಜಾಳವಾಳಿ (ಖಣ)–ಇಷ್ಟಾರ್ಥವನ್ನು. ಭಂಗಿಸಿ–ಜರೆದು.

36. ಅಧರ–ಕೆಳತುಟಿ. ಇಡುವ–ಹರಿಯುವ. ಮನದಮೂರ್ಛೆ–ಶೋಕಾವೇಶದಿಂದ ಮೈಮರೆವ. ಲಟಕಟಿಸುವ–ನಡುಗುವ. ಬಿಕ್ಕುತ–ಬಿಕ್ಕಳಿಸುತ್ತ; ಬಿರಿಯುತ–ಬಾಯ್ಬಿರೆದು ಉಸಿರುಬಿಡುತ್ತ. ತಂದೆ, ಅರಸ, ಮರಿಯಾನೆ ಇತ್ಯಾದಿ ಪ್ರೇಮ ಸೂಚಕ ಪದಗಳು. ಅಧಿದೇವಿ–ಉತ್ತಮಳು. ಅಂಕ–ತೊಡೆ. ಆತಂಕ–ದುಃಖ. ಶಂಕಿಸು-ಸಂದೇಹಪಡು. ಅಂಕದವರು–ಪಾರ್ಶ್ವದಲ್ಲಿದ್ದವರು. ಆಡಿದ...ಪರಾಭವವ–ಹೇಳಿದ ಕ್ರೂರವಾದ ಮಾತುಗಳ ಹೊಡೆತವನ್ನೂ ತಿರಸ್ಕಾರವನ್ನೂ. ಸವತಿ (ತ್ನ) ಸಪತ್ನಿ. ಕರಾಳ....ಹತಿಯಲಿ–ಕ್ರೂರವಾದ ಮಾತುಗಳೆಂಬ ಕತ್ತಿಯ ಹೊಡೆತದಿಂದ. ಕಾಡ+ಉರಿ–ಕಾಡ್ಗಿಚ್ಚು. ಕೊಂಡು-ತಗಲಿ. ಲೋಲಲೋಚನೆ–ಚಂಚಲವಾದ ಕಣ್ಣುಳ್ಳ ಸುಂದರಿ. ಬಾಷ್ಪ ...ತೀಕ್ಷಣೆ–ಕಣ್ಣೀರನ್ನು ಸುರಿಸುವುದರಿಂದ ಮುಚ್ಚಲಾರದ ಕಣ್ಣುಗಳುಳ್ಳವಳಾಗಿ. ಉತ್+ಮೀಲಿತ–ತೆರೆದ. (ಇಲ್ಲಿ ಪರಿಣಾಮಾಲಂಕಾರವನ್ನೂ ಉಪಮಾಲಂಕಾರವನ್ನೂ ನೋಡುವುದು).

37. ವಾಚಕಕೆ....ಮಾತಿನಲ್ಲೂ ಕೂಡ ನನ್ನ ಹೆಸರೆತ್ತನು; ಅಂಥ ಪಾಪಿಯಾದ ನನ್ನ ಬಸಿರಲ್ಲೇಕೆ ಜನಿಸಿದೆ? ಗೋಚರಕೆ–ಕಣ್ಣೆದಿರಿಗೆ. ಹೇಗೆ ಉಚಿತವನು ಆಚರಿಸುವನು? (ಪ್ರೇಮವನ್ನು ತೋರಿಸುವನು)? ಮಮತೆಗೆ (ಪ್ರೇಮಕ್ಕೆ) ಯಾಚಕನು–ಬೇಡುವವನು. ಪ್ರೇಮಕ್ಕೆ ಹೊರಗಾದವನು. ಲಲಿತವಾದ ಅಂಗವುಳ್ಳ ಸುನೀತಿ. ಲೋಗರು–ಅನ್ಯರು. ಬಳಿಸಂದು....ಜೀವರಿಗೆ–ಜನರಿಗೆ ಅವರವರು ಮಾಡಿದ ಶುಭಾಶುಭ ಕರ್ಮಗಳು ಸಂಗಡವಿದ್ದು ಸುಖವನ್ನೂ ದುಃಖವನ್ನೂ ಉಂಟುಮಾಡುತ್ತಿರುವುವು. ಊಡು– ಉಣ್ಣಿಸು. ಮಚ್ಚರ(ತ್ಸ)ಮತ್ಸರ. ಇಂದು....ಕಂದ–ಇಂದು ಸುರುಚಿಯು ಗರ್ವದಿಂದ ವಿಷ್ಣುವನ್ನು ಆರಾಧಿಸೆಂದು ನಿನಗೆಂದರೂ ಅವಳು ಹಿತವಾದುದನ್ನೆ ಅಂದಳಲ್ಲವೆ? ಖೋಡಿ- ಬೇಸರ. ಪರರಿಗೆ....ಬೇಡ–ಬೇರೆಯವರಿಗೆ ಕೇಡೆಣಿಸದಿರು; ಮತ್ತೊಬ್ಬರ ಸಂಪತ್ತನ್ನು ಬಯಸದಿರು. ನರಕಾಸುರನ ಸೇನಾಪತಿಯಾದ ಮುರನೆಂಬ ರಕ್ಕಸನನ್ನು ಕೊಂದ ವಿಷ್ಣುವು. ಕಾಡೊಳಗೆ....ಕಾಣೆನು–ಇಲ್ಲಿ ತಾನು ಸುಮ್ಮನೆ ಅತ್ತುಕೊಂಡರೆ ಬೇಡೆನ್ನುವವರನ್ನು ಕಾಣೆ. ಅ (ಇಲ್ಲ) ಚ್ಯುತ (ನಾಶ).

38. ಹರಯ (ಕ್ವ) ಪ್ರಾಯ. [ಐದೇ ವರ್ಷ ವಯಸ್ಸು] ನಿಜಮತಿ–ನಿನ್ನ ಮನಸ್ಸು. ವಿಷಮ–ಕಠಿನ. ನಿಜ (ತನ್ನ) ಬಸಿರನು (ಹೊಟ್ಟೆಯನ್ನು) ತಿಕ್ಕಿ ತಿಕ್ಕಿ (ಹೊಸೆ) ಅಳಲಿ (ದುಃಖಿಸಿ) ಫಲವೇನಿದೆ?

39. ಮಾನನಿಧಿ–ಬಹಳ ಮರ್ಯಾದೆಯುಳ್ಳವನು. ಭಾನು....ತೇಜದ–ಸಾವಿರಾರು ಸೂರ್ಯ ಚಂದ್ರ ಅಗ್ನಿಗಳಿಗೆ ಸಮಾನವಾದ ಶಾಂತ ಮತ್ತು ತೀವ್ರ ತೇಜಗಳಿಂದ ಕೂಡಿದ; ತತ್ವವಿದ್ಯಾದಾನಿ–ಆತ್ಮವಿದ್ಯೆಯನ್ನು ಉಪದೇಶ ಮೂಲಕ ಕೊಡುವ ಅಖಂಡಲ (ಇಂದ್ರ). ಅರ್ಚಿತ–(ಪೂಜಿಸಲ್ಪಟ್ಟ). ಕೈತಣಿಯೆ–ಕೈಗೆ ತೃಪ್ತಿಯಾಗುವಂತೆ. ಅವನಿ (ಭೂಮಿ) ಮಂಡಲ–ಭೂಮಿಗೆ ಅಲಂಕಾರಿಯಾದ. ['ಮಡಿ'ಗೆ ಅಲಂಕಾರಾರ್ಥವೂ 'ಲಾ'ಧಾತುವಿಗೆ ಕೊಡು ಎಂಬರ್ಥವೂ ಇರುವುದು.] ಮನೋ...–ಇಚ್ಛೆಯು ಕೈಗೂಡು ಇದೆಯಲ್ಲವೆ? ಅಯತ್ನದಲಿ+ಪ್ರಯಾಸವಿಲ್ಲದೆ. ಪದದ....ಒಯ್ಯನೆ–ಪಾದದ ಬಳಿ ಯಲ್ಲಿ ಕೋಲನ್ನು ಕೆಡದಂತೆ ಉದ್ದಕ್ಕೆ ನಮಸ್ಕಾರಮಾಡಿದನು. ಹದನ–ಸಂಗತಿ. ಜಡಿದು–ಗದರಿಸಿ. ಅಡರು–ಏರು. ಬಣಗು–ಅಲ್ಪ.

40. ತೇಜ–ಯೋಗ್ಯತೆ. ಅಂಭೋಜನೇತ್ರ–ವಿಷ್ಣು (ಏಕೆ?) ಅವಜ್ಞೆ–ತಿರಸ್ಕಾರಕ್ಕೆ ತಾನು ಪಾತ್ರನಾಗಿ. ಓಜೆ–ರೀತಿ. ಭಾಗ್ಯ–ಪುಣ್ಯ. ತನುವ....ಬಂದೆ–ದೇಹವನ್ನು ಧರಿಸಿ ಬಂದಂತೆ ಬಂದೆ. ಆಪದ್ಗತರಂ–ಆಪತ್ತಿಗೆ ಗುರಿಯಾದವರನ್ನು. ವಾಸನಿಸಿ–ಮೂಸಿನೋಡಿ (ಪ್ರೇಮ). ಕಣ್ಣಲ್ಲಿ ನೀರು ಸುರಿಸುತ್ತ, ಪ್ರೇಮವನ್ನು ಸೂಚಿಸುವ ಮಾತುಗಳಲ್ಲಿ. ಉತ್ತಮ+ಅಂಗ–ತಲೆ. ಹಾಲ (ನುಣ್ಣುವ) ಹಸುಳೆ–ಕೂಸು. ಬೀಳೆ–ಬೀಳುವಂತೆ. ಸಿಟ್ಟಿನ ಬೈಗಳನ್ನು ನಾರದನು ಹೇಳುವಂತಿದೆ. ದು(ಷ್ಟ)ಶೀಲ–ಕೆಟ್ಟಸ್ವಭಾವ. ಬೀಳುಕೊಡು–ಕಳುಹು. ಬೆಚ್ಚನೆ+ಸುಯ್ದು–ನಿಟ್ಟುಸಿರು ಬಿಟ್ಟು.

41. ತಾಪಸ–ತಪಸ್ವಿ. ಮನೋರ....ಇಚ್ಛೆಯನ್ನು ಮಾಡಬಹುದೆ? ವಿಫಲ+ಸಫಲ. ಅತಿಶಯಪದಾರ್ಥ–ಶ್ರೇಷ್ಠವಸ್ತು. ಸಿದ್ಧಿ–ಕೈಗೂಡುವಿಕೆ. ಸಂತವಿಡು–ಸಮಾಧಾನಮಾಡು. ಅಂತ–ಕೊನೆ. ವಚೋ–..ನಾದಲರಿಯವು–ಸುರುಚಿಯ ಮಾತೆಂಬ ಕಠಿನವಾದ ಬೆಂಕಿಯಿಂದ ನನ್ನ ಮನಸ್ಸು ಕಾದುಹೋದುದರಿಂದ, ನಿನ್ನ ಮಾತೆಂಬ ಅಮೃತಬಿಂದುಗಳಿಂದಲಾದರೂ ಅದನ್ನು ತಣ್ಣಗೆ ಮಾಡಬರುವುದಿಲ್ಲ. ವಿಷ್ಣುವು ಸುಲಭವಾಗಿ ದೊರೆವ ವಿಧಾನವನ್ನು ಉಪದೇಶಿಸಬೇಕಲ್ಲದೆ ಹಿಂದಿರುಗಬೇಕೆಂದು ಉಪದೇಶಿಸುವುದರಿಂದ ಪ್ರಯೋಜನವಿಲ್ಲ. ದುರಂತ–ಕಠಿನವಾದ. ಎದೆ (ಹೃದಯ) ಮನಸ್ಸು. ನಾದು–ಒಪ್ಪಮಾಡು. ವಿಷಾದ–ಚಿಂತೆ. ಕೈನೆಲ–ಭತ್ತದ ಸಸಿಗಳಾಗುವ ಗದ್ದೆ, ಹುಟ್ಟುನೆಲೆ. ರಾಜಸದಮನ–ರಜೋಗುಣದಿಂದ ಕೂಡಿದ ಮನಸ್ಸು. (ಪ್ರತಿ ಹಿಂಸೆಯಗುಣ) ಇದು ಕ್ಷತ್ರಿಯರ ಸ್ವಭಾವ. ಖತಿಗೆ....–ನಾನು ರಜೋಗುಣವುಳ್ಳ ಕ್ಷತ್ರಿಯನಾದುದರಿಂದ ಮಲತಾಯಿಯ ತಿರಸ್ಕಾರದಿಂದ ನನ್ನ ಮನಸ್ಸು ಕೋಪಕ್ಕೆ

ನೆಲೆಯಾಗಿದೆ. ಪರಿಣಾಮಲಂಕಾರ. ವಿ(ವಿಶೇಷವಾಗಿ) ಬುಧ (ಬುದ್ಧಿಯುಳ್ಳವ)-ದೇವತೆ. ಅನ್+ಉಪಮನೆ-ಎಣೆಯಿಲ್ಲದವನೆ. ಲೋಚನ-ಕಣ್ಣು.

41-42. ಸಾಧಿಸಿಕೊಂಡೆ-ಕೈಗೂಡಿಸಿಕೊಳ್ಳುವೆನು. ಒಡಲು-ದೇಹ. ಸಂದ-ಸಲುವಳಿಯಾದ, ಪ್ರಸಿದ್ಧ. ಕಿರಿದು+ಮರ. ಮುನ್ನ-ಮೊದಲು. ಪನ್ನಗ (ಪತ್-ಪಾದಗಳು, ನ-ಇಲ್ಲದೆ, ಗ-ಚಲಿಸುವುದು) ಸರ್ಪ. ಉನ್ನತೋನ್ನತ-ಅತಿಶ್ರೇಷ್ಠ. ಆರೋಹಿಸುವ-ಏರುವ. ಅರ್ಣ (ನೀರು)+ವ (ಹೆಚ್ಚಾಗಿ ಉಳ್ಳುದು) ಸಮುದ್ರ. ಶ್ರೇಯಸು-ಒಳ್ಳಿತು. ಇಷ್ಟ-ಬಗೆದುದು, ಮನೋಭಿಪ್ರಾಯ+ಸಿದ್ಧಿ-ಮನೋಭೀಷ್ಟವು ಸಿದ್ಧಿಸುವುದು. ನಾರ (ನೀರೇ)+ಅಯನ (ವಾಸಸ್ಥಾನವಾಗುಳ್ಳವ) ವಿಷ್ಣು. ಕೌಸ್ತುಭ-ಸಮುದ್ರ; ಅದರಲ್ಲಿ ಹುಟ್ಟಿದುದು ಕೌಸ್ತುಭ. ದ್ಯುತಿ-ಪ್ರಕಾಶ. ವಕ್ಷಸ್ಥಲ-ಎದೆ. ಪರಿವಸಿತ-ಚೆನ್ನಾಗಿ ಶೋಭಿಸುವ. ಪತ್ರಪುಷ್ಪ ಮಯೀಮಾಲಾ ವನಮಾಲಾ ಪ್ರಕೀರ್ತಿತಾ-ಎಲೆಹೂಗಳಿಂದ ಕೂಡಿ ಪಾದಾವಲಂಬಿತವಾದ ಮಾಲೆಯೆ ವನಮಾಲೆ. ಕರ ಚತುಷ್ಟಯ-ನಾಲ್ಕು ಕೈಗಳಲ್ಲಿ. ದೀಪ್ತಿ-ಪ್ರಕಾಶಿಸುವ. ಚಕ್ರ-ಸುದರ್ಶನ ಆಯುಧ. ಶಂಖ-ಪಾಂಚಜನ್ಯವೆಂಬುದು. ಭಾಸುರ-ಪ್ರಕಾಶಿಸುವ. ದಿಕ್+ಅಂತ-ದಿಕ್ಕುಗಳ ಕೊನೆಯುಳ್ಳ.

42-43. ವ್ಯೆತೋರುವನು-ಪ್ರತ್ಯಕ್ಷನಾಗುವನು. ತಲೆ+ತಡವಿ-ತಲೆಸವರಿ. ಬಲ+ಬಂದು-ಪ್ರದಕ್ಷಿಣೆಮಾಡಿ. ಉಮ್ಮಳಿಸುತ—ವ್ಯಸನಗೊಂಡು. ಒಯ್ಯನೆ—ಮೆಲ್ಲನೆ. ತಪಃ+ವನ. ಕಲುಹೃದಯರೊ-ಕಲ್ಲಿನಂತೆ ಎದೆ(ಮನಸ್ಸು) ಉಳ್ಳವರೊ. ಪರಿಕಿಸು-ಪರೀಕ್ಷಿಸು. ಅಮರ....ಚರಣ-ದೇವತೆಗಳಿಂದಲೂ ಪೂಜಿಸಲ್ಪಡುವ ಪಾದಗಳುಳ್ಳ ನಾರದನು. ಹರಿಪಾದ+ಅಬ್ಜವ+ಸೆರೆ+ಪಿಡಿದು. ಯೋಗನಿಷ್ಟೆ-ಯೋಗ (ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಇವೆಂಟು ಯೋಗ)ಗಳ ಅನ್ನುಸರಣೆಯಿಂದ. ಅಂತರ್ಧಾನರಸ-ಒಳಗಿದ್ದು ನೋಡುತಿದ್ದ ಇಷ್ಟ ವಸ್ತುವು. ಪ್ರಕಾಶಮಾನವಾಗಿ ಅರತುದು-ಅರಳಿದುದು. ತನ್ನೊಳಗೆ ನೋಡುತಿದ್ದ ವಸ್ತು ಮನಸ್ಸಿನಲ್ಲಿ ಮರೆಯಾಯಿತು. ಭಯ+ಅಬ್ಧಿಯಲಿ+ಅದ್ದ+ಕಂಗಳ. ಹರುಷ.-ಮೈಯನ್ನು ರೋಮಾಂಚವಾಗಿ ಸಂತೋಷಸಾಗರದಲ್ಲಿ ತೇಲಾಡುತ್ತ. ಭದ್ರ-ಮಂಗಳ ಕಾಯ-ಮೈ. ಮುದಿತ+ಉದ್+ನಿದ್ರವದನನು-ಸಂತೋಷದಿಂದ ಅರಳಿದ ಮುಖವುಳ್ಳ ಧ್ರುವನು.

43-44. ಅರಿಕೆ-ಅಪೇಕ್ಷೆ. ಮುಂದು+ಸೆರಗು (ಮುಂಜೆರಗು) ಹುಡಿ-ಧೂಳು. ತೊಡೆದು-ಒರಸಿ. ಅನುರಾಗ....ಸಂತೋಷದಿಂದ ಒಸರಿದ ಕಣ್ಣೀರನ್ನು ಸುರಿಸುತ್ತ ನೋಡಿ. ತಡೆಯದೆ-ಈಗಲೆ. ಕಾಲನ....ಯಮನ ಕತ್ತಿಯ ಪೆಟ್ಟಿಗೆ ಗುರಿಯಾಗದ. ಪದ-ಸ್ಥಾನ. ಮೇಟ (ತ್ರ) ಮೇಥೀ. ಧಾನ್ಯವನ್ನು ಒಕ್ಕುವುದಕ್ಕಾಗಿ ಎತ್ತುಗಳನ್ನು

ಕಟ್ಟುವ ಕಂಬ. ದೇವರ್ಷಿಗಳು ಮರೀಚಿ, ಅಂಗಿರಾ, ಅತ್ರಿ, ಪುಲಸ್ತ್ಯ, ಪುಲಹ, ಕೃತು, ವಸಿಷ್ಠ ಎಂಬ ಸಪ್ತರ್ಷಿಗಳು. ಮೇಟಿಯ ಕಂಬದ ಸುತ್ತಲು ತಿರುಗುವ ಎತ್ತುಗಳಂತೆ, ದೇವರ್ಷಿಗಳ ಸಮೂಹವು ಯಾವ ಸ್ಥಾನದ ಸುತ್ತಲೂ ಭಯದಿಂದ ತಪ್ಪದೆ ತಿರುಗುವುದೊ ಆ ಸ್ಥಾನವನ್ನು ನಿನಗೆ ಕೊಟ್ಟೆನು. ಸದ್ಯ ನೀನು ನಿನ್ನ ತಂದೆಯ ರಾಜ್ಯವನ್ನಾಳಿ ರಾಜ ಭೋಗಗಳನ್ನು ಅನುಭವಿಸಿ ಆ ಸ್ಥಾನಕ್ಕೆ ಬರುವೆ. ಅಂಥ ವೇಳೆಯೊದಗಿದಾಗ ನಾನು ನಿನ್ನನ್ನು ಅಲ್ಲಿಗೆ ಕರೆಸಿಕೊಳ್ಳುವೆನು. ಹಾನಿ....–ಶುಭಾಶುಭಗಳು ತನ್ನವು. ಕೃಪಾ..–ದಯೆಯಿಂದ ಶೋಭಿಸುವ ಹೃದಯವುಳ್ಳವನು. ಧರೆಯಲಿ(ತೊಡೆಯಿಂದೆತ್ತಿ) ಕುಳ್ಳಿರಿಸಿ. ಅಂತರ್ಧಾನಗತಿ....–ಕಣ್ಮರೆಯಾದನು. ಅನೀಕ–ಗಣ.

44. ಕನ್ನಡ ಭಾರತದೊಳಗಣ ಪದ್ಯಗಳು (ಈ ಪದ್ಯಗಳೆಲ್ಲವುಗಳನ್ನು ಸರಿ ಯಾಗಿ ತಿಳಿದುಕೊಳ್ಳಲು ಬಾಲಕರ 'ಮಹಾಭಾರತ ಕಥೆ'ಯನ್ನೋದುವುದು). ಏಕ ಚಕ್ರದ ರಾಜಧಾನಿಯು ವೇತ್ರಕೀಯ ಗ್ರಹವೆಂದೂ ಅದನ್ನು ಬಕಾಸುರನಿಗೆ ಹೆದರಿದ್ದ ದುರ್ಬಲನಾದೊಬ್ಬ ಅರಸು ಆಳುತ್ತಿದ್ದನೆಂದೂ ಭಾರತದಲ್ಲಿದೆ. ಯಾಚಕತನ— ಭಿಕ್ಷಾವೃತ್ತಿ. ಆತಿಥ್ಯ–ಅತಿಥಿಸತ್ಕಾರ....ಭಿಕ್ಷಾವೃತ್ತಿಯಿಂದ ಹೊಟ್ಟೆಹೊರೆದು ಕೊಳ್ಳುತ್ತಾ, ಕತಿಪಯ–ಕೆಲವು. ಭಿಕ್ಷೆಯೆಂಬ ವಿಹಿತವಾದ (ಉಚಿತ) ವ್ಯಾಪಾರ ದಿಂದ ಬೇಡುತ್ತಾ. ಹೇಳ್ವಡೆ, ಹೇಳುವ ಎಂದರೆ. ಹಸ್ತಿನ್ ಎಂಬ ರಾಜನಿಂದ ರಚಿ ತವಾದ ನಗರ. ಶಕ್ರ +(ಇಂದ್ರ) ಸೂರ್ಯರ (ದ್ವಂದ್ವಸ). ತೇಜ–ಬಲ, ಪ್ರಕಾಶ, ಪ್ರತಿಭೆ. ಹಸುಗೆ–ಪಾಲುಮಾಡುವಿಕೆ. ಪಾಡು–ಸ್ಥಿತಿ. ಮಾಸ+ಅಂತರದಲಿ–ತಿಂಗಳು ಕಳೆದ ಬಳಿಕ. ಶೋಕ (ದುಃಖ) + ಆರ್ತರವ (ದಿಂದ ಹುಟ್ಟಿದ ಅಳುವನ್ನು). ಸಾಯಾಂತರ–ಸಂಜೆ. ಉತ್ಕರ್ಷ–ಅತಿಶಯ. ಆಯ–ಲಾಭ. ತನಗೆ+ಉಂಟೆಂದು. ರಕ್ಕಸ (ತ್ಸ) ರಾಕ್ಷಸ. ನಾಯಿಯಂತಹ ನೀಚನಾದ ಬಕನು. ಶೈಲಶಿಖರ–ಬೆಟ್ಟದ ತುದಿ. ಆಯಿದು....–ಪ್ರತಿಯೊಬ್ಬನ ಮನೆಮನೆಯಿಂದಲೂ ಆರಿಸಿಕೊಂಡು. ಮೇಲ್+ ಆಯ–ನಂತರ, ಅದಲ್ಲದೆ. ಮುಹಿಪದ್ವಯ—ಎರಡು ಕೋಣ. ನಿರ್ದಾಯದಲಿ— ನಿಶ್ಚಯವಾಗಿ. ಖಂಡುಗ–20 ಕೊಳಗ. ಓಗರ–ಅನ್ನ.

45. ಬಾರಿ (ತ್ಸ) ವಾರ. ತೆತ್ತರೆ. ಇನಿತುವನು........ತುಪ್ಪನು—ಪ್ರತಿ ಮನೆಯ ಸರದಿಯ ದಿನ ಇಷ್ಟನ್ನೂ ಕೊಟ್ಟರೆ ತೃಪ್ತನು. ಇಲ್ಲದಿದ್ದಲ್ಲಿ....ಬಾರಿ– ನಾಳಿನ ಸರದಿಯು ತನಗೆ ಮಾರಿಯಾಗಿ ಬಂತು. ತನ್ನ ಮಗನನ್ನೂ ತನ್ನನ್ನೂ ಬಿಟ್ಟು. ಮಾನಿಸರ್ (ಮನುಷ್ಯ-ತ್ಸ)–ಜನರು. ಪಾರಲೌಕಿಕವು+ಅಗದು+ಅಹುದು–ಇಹಪರ ಗಳು ಎರಡೂ ಕೆಡುವುವು. (ಪುತ್ರನನ್ನು ಪಡೆದು ನೋಡಿ ಅವನ ಸೇವೆಯಿಂದ ಉಂಟಾದ ಇಹಸುಖವೂ, ಅವನು ದಾಟಿಸುವ ನರಕದಿಂದಲೂ ಮಾಡುವ ಶ್ರಾದ್ಧಾದಿ ಗಳಿಂದಲೂ ಪಡೆವ ಪರಲೋಕದ ಸುಖವೂ). ಮಗನನ್ನು ರಕ್ಕಸನಿಗೆ ಕೊಟ್ಟು ತಾನು

ಉಳಿದನೆಂದು ಅಪಕೀರ್ತಿ ತನಗೆ ಬರುವುದು. ಭೇದ–ನಾಶ. ಹಗೆ–(ಯಂತೆ) ದುಃಖವನ್ನು ಇದು ಉಂಟುಮಾಡುವುದು. ಅಸುರ–(ರಕ್ಕಸನ) ಘಾತಿ–(ಕೊಲೆ)ಗೆ. ವಿಭ್ರಾಂತಿ–ಚಿಂತೆ ಇಲ್ಲದೆ. ಸಾಸಿ (ತ್ಸ) ಸಾಹಸಿ. ಎರಡೆಂಟರಿಯು–ಎರಡರಿಂದ ಎಂಟರ ತನಕ ಎಣಿಸಲೂ ಬಾರದ ಮೂರ್ಖನು. ಉದರಕೆ....–ಇವನ ಹೊಟ್ಟೆಗೆ ಸಾಕಷ್ಟು ಕೂಳನ್ನು ಒದಗಿಸಲಾರೆನು. (ಮೂರು ಲೋಕಗಳಲ್ಲಾದರೂ ದಿಗ್ವಿಜಯ ವನ್ನು ಉಂಟುಮಾಡತಕ್ಕ ಯೋಗ್ಯರೂ ತನಗಿದ್ದರೂ ಇವರನ್ನೀಗ ತಿರಿದುಣಿಸಬೇಕಾ ಗಿದೆ. ಮುಂದೆ ಇವರು ವಿಶೇಷ ಕಾರ್ಯಗಳನ್ನು ಮಾಡುವವರಾಗಿದ್ದಾರೆ. ಬಲವೂ ಸಾಹಸವೂ ಉಳ್ಳ ಕ್ಷತ್ರಿಯ ವೀರರು! ಅದನ್ನು ಮಾತ್ರ ಈಗ ಪ್ರಕಟಿಸಲಾಗದು. ಶತ್ರುಗಳ ವಿಚಾರದಲ್ಲಿ ಕೇವಲ ದುರುಳನಾದ ಅವರಲ್ಲೊಬ್ಬನನ್ನು ನಿನಗೆ ಈಗ ಕೊಡುವೆನೆಂದು ನಗುತ್ತ ಕುಂತಿಯು ಹೇಳುವ ಈ ಮಾತುಗಳ ಗೂಢಾರ್ಥವನ್ನು ತಿಳಿದುಕೊಳ್ಳುವುದು). ಲೋಗರ–ಅನ್ಯರ ದಧೀಚಿ–ಜೀಮೂತವಾಹನ ಇವರ ಕಥೆ ಗಳನ್ನು ಮುಂದೆ ನೋಡಿಕೊಳ್ಳುವುದು. ('ನಾಗಾನಂದ' ಕಥೆ ನೋಡಿರಿ).

46. ಅರ್ಥ–ದ್ರವ್ಯ. ಮತ್ತೊಬ್ಬನ ಅರ್ಥವನ್ನು ಉಳಿಸಿಕೊಡಲು ಯಾವನ ಅರ್ಥವು ಸಂಜೀವನದಂತೆ ವಿನಿಯೋಗಿಸಲ್ಪಟ್ಟುದೊ, ಯಾವನ ಪ್ರಾಣವು ಪರರುಪ ಕಾರಕ್ಕಾಗಿಯೆ ವ್ಯಯಿಸಲ್ಪಟ್ಟಿತೊ....ವಿರಿಂಚಿ–(ಬ್ರಹ್ಮ). ಪುರಂ (ಶತ್ರುಗಳ ದೇಹ ದಲ್ಲಿ)+ದರ (ಸೀಳುವವನು)–ಇಂದ್ರ, ಮೊದಲಾದ ದೇವತೆಗಳಿಗೆ ಇವರಿಬ್ಬರೇ(ಸಂಭಾ ವನೀಯರು) ಪೂಜ್ಯರು. ಬ್ರಾಹ್ಮಣ ವೇಷದಲ್ಲಿದ್ದ ಕಾರಣ ಭೀಮನು ಬೆರಳಲ್ಲಿ ಪವಿತ್ರ ವನ್ನು ಧರಿಸಿದ್ದನು. ಈಗ ಬಕಾಸುರ ವಧೆಗಾಗಿ ಕ್ಷತ್ರಿಯತ್ವವನ್ನು ವಹಿಸಿ ಆ ವೇಷ ವನ್ನು ತ್ಯಜಿಸಿದನು. ಧೌತ–ತೊಳೆದ. ರಜ–ಧೂಳು. ಅಂಘ್ರಿ–ಪಾದ. ಹರಿತಂದು– ಬೇಗನೇ ಬಂದು. ಅಡರು–ಏರು. ಪುರ (ಪೌರ) ಜನರು ಬರಲು, ಸಾರಿ–ಹಿಂದೆರಳಿ. ಹೊಯ್ದು (ಗದರಿಸಿ ಹೊಡೆದು) ಮಾರುತಿ–(ವಾಯುವಿನ) ಮಗನಾದ ಭೀಮನು. ಹೊಕ್ಕು (ಕಾಡಿನಲ್ಲಿ) ಹರಿಸಿದನು–ಓಡಿಸಿದನು. ಎಡೆಯಲೇ–ನಡುವೆಯೇ (ದಾರಿ ಯಲ್ಲೆ) ಹೊಡದು (ತಿಂದು). ಹರವಿ–ಗುಡಾಣ. ಸುರಿದನು–ಬರಿದುಮಾಡಿದನು. ಪಕ್ಕಲೆ–ಚಿಕ್ಕಪಾತ್ರೆ. ಕುನ್ನಿ–ನಾಯಿ, ನೀಚ.

47. ಶೇಷ–(ತಿಂದು) ಉಳಿದ. ತೋರದ–ದೊಡ್ಡದಾದ. ತೂಗುತ್ತ–ಮೇಲೆ ಕೆಳಗಾಗಿ ಕೈಯಿಂದ ತೂಗುತ್ತ. ಏಡಿಸು–ಹಾಸ್ಯಮಾಡು. ತುತ್ತು... –ಹಸಿವು ಹೆಚ್ಚಾ ಗಿರಲು, ಗಂಟಲಲ್ಲಿ ಆಹಾರವು ಸಿಕ್ಕಿಕೊಂಡಂತಾಗುವುದು. ತೊಡಕಲು–ತೊಂದರೆ. ಮುರಿದು–ಸಿಟ್ಟಿನಿಂದ ಅಥವಾ, ಮೈಮುರಿದು ಬೇಸರ ತೊಲಗಿಸಿ. ಏನು....–ಹಾಗೆ ಬಕನು ಎರಡೂ ಮುಷ್ಟಿಗಳಿಂದ ಗುದ್ದಿದರೂ ಭೀಮನ ಊಟದ ಗದ್ದಲದಲ್ಲಿ ಅವನಿಗೆ ಅದು ತಿಳಿಯಲೇ ಇಲ್ಲ. ಅರೆ....–ಅರ್ಧ ಊಟವಾಗಿದೆ; ಪೂರ್ಣವಾಗಲಿ! ಸಿಕ್ಕಿ... –

ಭೀಮನು ಬಕನಿಗೆ ಸಿಕ್ಕಿದನೆಂದು ಕಾಣುವ ಹಾಗೆ ಸುಮ್ಮನೆ ತಾನಾಗಿ ಭೀಮನು ಅವನ ವಶವಾಗಿ, ವಿನೋದಕ್ಕಾಗಿ. ಹೊಕ್ಕು-ವಶದಲ್ಲಿರುವಾಗಲೇ. ಬಿಕ್ಕುಳಿನ-ಉಸಿರು ತಡೆದು ತಡೆದು ಬರುವ. ತಾಳಿಗೆ-ಗಂಟಲು. ಒಕ್ಕ-ಹೊರಟ. ರುಧಿರ-ರಕ್ತ. ಡೊಕ್ಕರಿಸು-ನೆಲಕ್ಕೆ ಎತ್ತಿ ಮಗುಚಿಹಾಕು. ಅಮಾನುಷ-ಮನುಷ್ಯರಿಗಿಲ್ಲದ. ಸುರ ರಾಯ (ಇಂದ್ರ)+ಯೋಗ್ಯವ-ಇಂದ್ರನಿಗಲ್ಲದೆ ಇತರರಿಗೆ ಇದು ಸಾಧ್ಯವಾದುದಲ್ಲ. ನಿಕಾಯ-ಸಮೂಹ. ಸಾಮಾನ್ಯವೇ-ಸಾಧ್ಯವಾಗತಕ್ಕುದೇ? ವಿಮಲ-(ಹೇರಳ)ಶ್ರೀ-(ಸಂಪತ್ತು). ಸೋಮಧರ-(ಚಂದ್ರನನ್ನು ತಲೆಯಲ್ಲಿ ಧರಿಸಿಕೊಂಡಿರುವ) ಶಿವನು. ಪದ್ಮ (ದಲ್ಲಿ) ಜ (ಹುಟ್ಟಿದ)-ಬ್ರಹ್ಮನು.

48. ದ್ರೌಪದೀ-ದ್ರುಪದನ ಕುವರಿ. ಸ್ವಯಂ (ತಾನಾಗಿಯೆ) ವರನನ್ನು ಹುಡುಕಿಕೊಳ್ಳುವುದು. ದ್ರೌಪದಿಯ ಇಷ್ಟಾರ್ಥನಾದ ಅರ್ಜುನನು ಬ್ರಾಹ್ಮಣವೇಷ ದಲ್ಲಿ ಕುಳಿತಿದ್ದ ಆ ಸಭೆಯಲ್ಲಿ ತಿರಿತಿರುಗಿ ಹೇಳಿದರು. 'ಯಂತ್ರ (ಮತ್ಸ್ಯವೆಂಬ) ಗುರಿಗೆ ಬಾಣಗಳನ್ನು ಕೇವಣಿಸಿ (ಎಸೆಯಿ)ರಿ!' ಈ ವಿವಾಹದಲ್ಲಿ ದ್ರುಪದ (ಪಾಂಚಾಲ ರಾಜ)ನು ಒಂದು ಭಾರವಾದ ಬಿಲ್ಲನ್ನೂ ಐದು ಬಾಣಗಳನ್ನೂ ತಂದಿಟ್ಟು,-'ಆ ಬಿಲ್ಲಿಗೆ ಹೆದೆಬಿಗಿದು ಆ ಐದು ಬಾಣಗಳನ್ನು ಅದರಲ್ಲಿಟ್ಟು ಐದು ರಂಧ್ರಗಳ ಮೂಲಕ ಎತ್ತರ ದಲ್ಲಿ ತೂಗುತಿದ್ದ ಮೀನಿನಾಕಾರದ ಒಂದು ಗುರಿಯನ್ನು ಕತ್ತರಿಸಿದವನಿಗೆ ದ್ರೌಪದಿ ಯನ್ನು ಕೊಡುವುದಾಗಿ ಶಪಥ ಮಾಡಿದ್ದನು. ಅರ....-ಕಮಲಮುಖಿಯ ಆಸೆ. ಸಾವೆಲ್ಲಿ? ಧನುವೆಲ್ಲಿ? ಮೃಷ್ಟ-ಸವಿಯೂಟ. ಬುಧ-ವಿದ್ವಾಂಸ. (ದುಷ್ಟ+ಕೀರ್ತಿ)× ಸತ್ಕೀರ್ತಿ. ದನಿ (ತ್ಸ) ಧ್ವನಿ. ವಚನ....-ನಾವು ಮಾತಿನಲ್ಲಿ ಬಹಳೇ ಸಮರ್ಥರು; ತರ್ಕವನ್ನೂ ಉಪನ್ಯಾಸವನ್ನೂ ಮಾಡಬಲ್ಲೆವು. ಪಾರ್ಥಿವ-(ಕ್ಷತ್ರಿಯರ) ನಿಚಯ-ಸಮೂಹ. ಅಚಲ-ಚಲನೆಯಿಲ್ಲದ, ಭಾರವಾದ. ನಮಗೀ....ವೈದಿಕವೇ-ಬಿಲ್ಲೆತ್ತಿ ಕ್ಷತ್ರಿಯ ಕನ್ಯೆಯನ್ನು ವಿವಾಹವಾಗುವುದು ವೇದದಲ್ಲಿ ಬ್ರಾಹ್ಮಣರಿಗೆ ಹೇಳಿದ ಧರ್ಮ ವಾಗಿಲ್ಲ. ಸೋ(ಶೋ)ಧಿಸಿದ-ಶುದ್ಧ ಮಾಡಿದ. ತನಿ-ಸವಿ. ಹೂರಿಗೆ-(ಸಕ್ಕರೆ ತುಂಬಿದ) ಭಕ್ಷ್ಯ. ಮೆದೆ-ರಾಶಿ. ಪಯಸ್-ಹಾಲು ಸೇರಿ ಆದುದು ಪಾಯಸ. ಪುಲ್ಲಿಗೆ-ಭಕ್ಷ್ಯದ ವಿಧ, ಅದರಂತೆ ಸೇವಿಗೆ, ಮಂಡಿಗೆ. ನವಘೃತ-ಹೊಸತುಪ್ಪ. ಸೂಪ ದಂಶಕ-ತೋವೆ. ಧೂರ್ತ-(ಪುಂಡು). ವಟು (ಬ್ರಾಹ್ಮಣ ಹುಡುಗರ) ನಿಕರ-(ಸಮೂಹ). ಪೃಥ್ವಿಯನ್ನಾಳುವವರು ಪಾರ್ಥಿವರು.

49. ಸನ್ನೆ(ತ್ಸ) ಸಂಜ್ಞಾ. ಕೈಕೊಂಡನು-ಒಪ್ಪಿಕೊಂಡನು. ಧೋತ್ರ....-ಉಟ್ಟ ಧೋತ್ರವನ್ನೂ ಬೆರಳಲ್ಲಿದ್ದ ಪವಿತ್ರವನ್ನೂ ಸರಿಮಾಡಿಕೊಳ್ಳುತ್ತ. ಪ್ರಥೆಯ ಮಗ ಪಾರ್ಥ. ಧನು-ಬಿಲ್ಲೆತ್ತುವುದಕ್ಕೆ ಅಲ್ಲವಷ್ಟೆ! ಅಂಘವಣೆ-ಅಭಿಪ್ರಾಯ. ಕಾಮಿನಿ-ಸುಂದರಿ. ವೈನತೇಯ-ವಿನತಾದೇವಿಯ ಮಗ, ಗರುಡ. ವಿಗಡಿಸಿದ-(ತಿರಸ್ಕರಿಸಿದ)

ಭಯಹುಟ್ಟಿಸಿದ. ಸದರವೊ–ಸಾಧಾರಣವೊ. (ಹೇಳಬೇಕಾದ ವಿಷಯವನ್ನು ಅದರ ಪ್ರತಿಬಿಂಬದಂತಿರುವ ವಿಷಯದಿಂದ ಹೇಳುವ್ರದು) ವೃತ್ತಿಸೂಚಕವಾದ 'ಅಡಿಗ' ಪ್ರತ್ಯಯ. ಮುಟ್ಟಿನೊಸಲಲಿ–ಹಣೆಯಲ್ಲಿ ಗೋಪಿಯ ನಾಮ. ಕುಶೆ–ದರ್ಭೆ. ಕರಡಿಗೆ (ತ್ಸ) ಕರಂಡಕ. ಕಕ್ಷೆ–ಬಗಲಗಂಟು. ಮುರಿದದರ್ಭೆಗಳ–ಪವಿತ್ರ. ಬಾಸರ....–ಬಿಮ್ಮನೆ ಕಟ್ಟಿದುದರಿಂದ ಬಹಳ ತೂಗುತಿರುವ ಕಚ್ಚೆಯಿಂದ (ಬ್ರಾಹ್ಮಣೋಚಿತವೇಷ). ಅಟ್ಟ....–ಜನರ ನಗೆಗೆ ಈಡಾಗಿ. ನಟ್ಟವಿಗ (ತ್ಸ) ನಾಟ್ಯವಿಕ. ವೇಷಧಾರಿ–ಅರ್ಜುನ. ಓಸರಿಸಿ–ಎದ್ದು. ಕೃಷ್ಣ (ಮೃಗದ) ಅಜಿನ–ಚರ್ಮ. ಸಮಿಧೆ–ಸಮಿತ್ತು, ಹೋಮಕ್ಕೆ ಬಳಸುವ ಗಿಡಗಳ ಕಡ್ಡಿ. ಔಪಾಸನದ ಕೊಳವಿ–ವಿವಾಹಿತನಾದವನು ಮಾಡತಕ್ಕ ಕರ್ಮಕ್ಕೆ ಅಗ್ನಿಯನ್ನು ನಿರ್ಮಿಸಲು ಬೇಕಾದ ಕೊರಡು.

50. ಹಾರುವರ (ಬ್ರಾಹ್ಮಣರ)+ಅತ್ತ–ಕಡೆಗೆ. ತಿಮಿಂಗಿಲ–ಮತ್ಸ್ಯದ ಗುರಿಯನ್ನು. ಗಡ–ಅಂತೆ! ಅವನನ್ನು ಮದುವೆಯಾದರೆ, ಬ್ರಾಹ್ಮಣರು ಪುರಾಣಾದಿಗಳನ್ನು ಓದಿ ಕಥೆ ಹೇಳುವರಾದ ಕಾರಣ ನಿನಗೆ ಬೇಸರವಿಲ್ಲದೆ ಹೊತ್ತುಕಳೆಯಲು ಬಂದೀತು. ತಲೆ+ಬಾಗಿ. ಉಂಗುಟ (ತ್ಸ) ಅಂಗುಷ್ಟ–ಕಾಲಿನ ಬೆರಳು. ಔಂಕು–ಒತ್ತು. ತೂಗಿ–ಎತ್ತಿ. ಉಗಿದು–ಎಳೆದು. ಯಂತ್ರವ....ನಲಿ–ಬಾಣಗಳು ಯಂತ್ರಕ್ಕೆ ತಗಲುವಂತೆ ಮಾಡಿದನು. ಲಾಗುವೇಗ–ಕೈಚಳಕ. ಆರುಬಲ್ಲರು–ಬಿಲ್ಲೆತ್ತಿದುದೇ ಅಷ್ಟರಲ್ಲಿ ಯಂತ್ರಮತ್ಸ್ಯವು ಕತ್ತರಿಸಲಾಯಿತು. ಕಾರ್ಮುಕ–ಬಿಲ್ಲು+ಯೋಗ–ಹೂಡುವಿಕೆ+ಸಿದ್ಧನು–ಕೈಗೂಡಿದವನು. ಕೋದಂಡ (ಧನು)+ಆಗಮ (ವೇದದಲ್ಲಿ) ತ್ರಿಪುರಗಳ ಅರಿ–ಶಿವನಂತಿರುವವನು. ವಂದಿ–ಹೊಗಳುಭಟ್ಟರು. ನಿರ್ದಾಯದಲಿ–ಪ್ರಯಾಸವಿಲ್ಲದೆ. ಆ ಯುವತಿ....–ದ್ರೌಪದಿಯ ಬಳಿಯಲ್ಲಿದ್ದ ಸ್ತ್ರೀಸಮೂಹವೆಂಬ ಸಾಗರವು ಉಕ್ಕಿತು. ಬಿಗಿದ ಬೆರಗು–ಬಹಳವಾದ ಆಶ್ಚರ್ಯ. ಲಲಿತ–ತಳತಳಿಸುವ. ಅಪಾಂಗ–ಕಡೆಗಣ್ಣು. ಮುಕ್ಕುಳಿಸೆ–ಅರ್ಜುನನ ರೂಪವನ್ನು ಕುಡಿದು. ತಣಿಯವು–ತೃಪ್ತಿಹೊಂದವು. ಪುಳಕಜಲ–ಆನಂದೋದ್ರೇಕದಿಂದ ಉಂಟಾದ ಬೆವರು. ನಿತಂಬಿನಿ–ಸ್ತ್ರೀ. ಹೊರೆದ–ವ್ಯಾಪ್ತವಾದ. ದಂಡೆ–ಸರ. (ಉಪಮಾನವನ್ನು ಉಪಮೇಯವಾಗಿ ಹೇಳುವುದು ಪ್ರತೀಪಾಲಂಕಾರ) ಹೂವಿನದಂಡೆಗೆ ದ್ರೌಪದಿಯ ಮೈಯಿಂದ ಪರಿಮಳ ಉಂಟಾಯಿತಂತೆ!

50-51. **ದ್ರೌಪದಿಯ ನೊರೆ:**–ದುಃಶಾಸನನು–(ದುಃಖದಿಂದ ಶಿಕ್ಷೆಮಾಡುವವನು)ದುರ್ಯೋಧನನ ಒತ್ತಿನ ತಮ್ಮನು, ಗಾಂಧಾರಿಯು ತಾಯಿ; ಸೊಸೆ(ತ್ಸ)ಸ್ನುಷಾ. ಆರು ಹೇಳೌ–ಸಮಾಧಾನ ಹೇಳು. ಭಾನುಮತಿ ದುರ್ಯೋಧನನ ಹೆಂಡತಿ. ಸೈಂಧವ (ಜಯದ್ರಥನು)–ಸಿಂಧುದೇಶದ ರಾಜನು, ಅವನ ಹೆಂಡತಿ ದುಶ್ಶಳೆ. ಗಂಡನ ಸೋದರಿ ವಯಸ್ಸಿನಲ್ಲಿ ಕಿರಿಯಾಗಿದ್ದಲ್ಲಿ ನಾದಿನಿ. ರೌರವ–ಭಯ. ವಿಳಾಸಿನಿ–ವಿನೋದವುಳ್ಳ ಸ್ತ್ರೀ. ಪಸಾಯ್ತೆಯರು–ಸೇವಕಿಯರು. ತರಳ (ಚಂಚಲವಾದ)+ಅಕ್ಷಿ (ಕಣ್ಣುವುಳ್ಳ

ವಳು) ಸುಂದರಿ. ಮಾರಿ–ಕೊಟ್ಟು. ಧರ್ಮ (ವೆಂಬ) ಸ್ಥಿತಿ (ಆಸ್ತಿ ಸಂಪತ್ತು) ಯನ್ನು. ಭೂಪತಿ (ಧೃತರಾಷ್ಟ್ರನಿ)ಗೆ. ಸುತನ....–ಮಗನ ಬುದ್ಧಿಯು ವಿಹಿತವೆಂದು ತೋರು ತ್ತಿದೆಯಲ್ಲವೆ? ಸಿರಿ (ತ್ಸ) ಶ್ರೀ-ಬುದ್ಧಿ. ಮೈದೆ....–ಐದು ಪ್ರಾಣವಾಯುಗಳಂತಿದ್ದ ನನ್ನ ಐವರು ಪತಿಗಳು ನನ್ನನ್ನು ತೊಲಗಿದರು. ಐದೆತನ–ಲಜ್ಜೆ. ಮೈದುನರ....–ನಿನ್ನ ಮೈದುನರ (ಕೌರವರ ಅಥವಾ ಪಾಂಡವರ) ಮೂರ್ಖತನದಿಂದ ನನಗೆ ಅನುಭವಿಸ ಬೇಕಾಗಿ ಬಂದಿರುವ ವಿಪತ್ತಿನಿಂದ ನನ್ನನ್ನು ಕಾಪಾಡು. (ದ್ರೌಪದಿಯನ್ನೊಡ್ಡಿ ಜೂಜಾ ಡಿದುದು ಧರ್ಮಜನ ಮೂರ್ಖತನವೆಂದೂ, ದುಃಶಾಸನನು ಅವಳ ಸೀರೆಯನ್ನು ಸೆಳ ವುದು ಮೂರ್ಖತನವೆಂದೂ ಭಾವವು) ಲಲಿತ+ಅಂಗಿ (ಬಹುವ್ರೀಹಿ) ಪ್ರಾಣವಾಯು ಗಳೈದು (ದ್ವಿಗು).

51-52. ಊರ+ಒಳಗೆ (ಸೊಂಟದ ಮೇಲಣ ಸೀರೆಯನ್ನು) ಸೀರೆ (ತ್ಸ) ಚೀರಾ. ಶಶಿಕಲೆಗೆ–ಚಂದ್ರನ 1/16 ಭಾಗಕ್ಕೆ; ರಾಹು....–ರಾಹುವಿನ ತುಟಿಯೊಡನೆ ಜಗಳಾಡು ವುದು. ಸದರವೆ–ಸಾಧ್ಯವೆ? ಚಂದ್ರನಿಗೆ ರಾಹುವಿನ ಬಾಯಿಂದ ತಪ್ಪಿಸಿಕೊಳ್ಳುವುದು ಸುಲಭವೆ? (ಲಲಿತಾಲಂಕಾರ) ಕೈ+ಕಾಯು (ಕಾಪಾಡು). ಗತಿವಿಹೀನ–ನಿರ್ಗತಿಕ. ರಿಪು+ಭಾಧಿತ–ಶತ್ರುವಿನಿಂದ ಭಾಧಿಸಲ್ಪಟ್ಟವ. ಆರ್ತ–ದುಃಖಿತರಿಗೆ. ಸತಿ (ಸ್ತ್ರೀ). ಪಶು–(ದನ) ದ್ವಿಜ (ಬ್ರಾಹ್ಮಣ) ಗರುವರು–ಯೋಗ್ಯರು. ಜೀವಿತ–ಪ್ರಾಣ. ದಿವಿಜರ (ದೇವತೆಗಳ) ತಾಯಿಯ (ಅದಿತಿದೇವಿಯ) ಪರಿಭವ (ಅವಮಾನ). ಪಯಃ (ನೀರು)+ ಧಿ (ಹೆಚ್ಚಾಗಿ ನಿಂತಿರುವುದು) ಸಮುದ್ರವನ್ನು ದಾಟಿ. ಅಮರ (ಮರಣವಿಲ್ಲದವರ)+ ಅರಿಗಳು (ಹಗೆ) ರಾವಣ ಮೊದಲಾದವರು. ಜಾನಕಿ–(ಜನಕನ ಮಗಳಾದ) ಸೀತೆ. ಹೆಣ್ಣ...–ಹೆಂಗಸರ ವಿಚಾರದಲ್ಲಿ ಕೆಲವರ ಮನಸ್ಸು ವ್ಯಥೆಗೊಳುವುದಿಲ್ಲ. (ವಾಮನಾವ ತಾರದ ಹಾಗೂ ರಾಮಾವತಾರದ ಕಥೆಗಳು) ಚರಣ (ಪಾದಗಳ) ಭಜಕರ (ಭಕ್ತರ) ಹರಿ ಬ....–ಪರಿಹರಿಸುವ ಭಾರವು ಇನ್ನಾರದು? (ಹರಿ–ಧಾತುವಿನ ಕೃದಂತ ಭಾವನಾಮ ಹರಿಬ). ಕೃಷ್ಣ....–ಕೃಷ್ಣನ ನಾಮಧ್ಯಾನವೇ ಧನವಾಗುಳ್ಳವರಿಗೆ. ಗಲ್ಲಣೆ–ಪೀಡೆ. (ಕೃಷ್ಣನಾಮಧ್ಯಾನತತ್ಪರರನ್ನು ಪಾಪವು ಪೀಡಿಸಬಲ್ಲುದೆ? ಭಕ್ತರೆಂಬುದೇ ಭಗವಂತನ ಸಂಸಾರವು). ಕರುಣಿಯಲ್ಲದೊಡೆ (ದಯಾಳುವಾಗಿ ಕಾಪಾಡದಿದ್ದಲ್ಲಿ).

52-53. ಯೂಥಪತಿಗಳು (ಗುಂಪಾಗಿರುವ ಐದುಮಂದಿ ಪತಿಗಳು). ಮಿಥಿಳನೆಂಬ ಜನಕನ ಮಗಳು ಮೈಥಿಳಿಯಾದ ಸೀತಾದೇವಿ. ಮೃಗ (ಜಿಂಕೆಯ ಕಣ್ಣಂತೆ ಚಂಚಲ ವಾದ) ನಯನೆ (ಕಣ್ಣುಳ್ಳವಳು). ಹೊಲಬು (ಆಶ್ರಯ). ಬಲ್ಲಿತು+ಹಳುವ–ಬಲು ಹಳುವ, ಭಯಂಕರವಾದ ಕಾಡು. ದ್ರೌಪದಿಯು ತಾನು ಅನಾಥಳಾಗಿದ್ದು ದುಷ್ಟ ಕೌರವರ ಕೈಗೆ ಸಿಲುಕಿದೆನೆಂದು ಹೇಳದೆ ಹುಲ್ಲೆಯ ಮಾತೆತ್ತಿ, ಭಾವನೆಯ ಪ್ರತಿಬಿಂಬ ವನ್ನು ಕಲ್ಪಿಸಲಾಗಿದೆ; ಲಲಿತಾಲಂಕಾರ. ಮೋದು–ಪೀಡಿಸು. ಬಕ (ಕೊಕ್ಕರೆ).

ಶುಕ (ಗಿಳಿ). ಶೋಕವನ್ನು ಮಾಣಿಸು–ಪರಿಹರಿಸು. ವಾಣೆಯು–ಅಲಸ್ಯ. ವಿಕಳೆ–ಭಯಪಟ್ಟವಳು. ಭಕ್ತರ ಬಂಧುವೆಂಬ ನಿನ್ನ ಬಿರುದನ್ನು ತಡೆದೆನು (ಆಶ್ರಯಿಸಿರುವೆನು). ನೃ (ನರ, ಮನುಷ್ಯ) ಹರಿ (ಸಿಂಹ)–ನರಸಿಂಹ. ಒದರು–ಮೊರೆಯಿಡು. ಖಳ+ಅಪಸ್ಮಾರ+ಇದು–ಈ ದುಷ್ಟ ಪಿಶಾಚವು. ತನ್ನ+ಅಸು (ಪ್ರಾಣ) ಆರಿಗೆ (ಕಾಪಾಡುವಿಕೆಯು) ಯಾರಿಗೂ ಬೇಡವಾಗಿದೆ ಮತ್+ಪ್ರಾಣ(ದ)+ವಿಭು(ಒಡೆಯ)–ಪತಿಗಳಿಗೆ. ವೈರಾಗ್ಯ–ವಿರಾಗ(ಪ್ರೇಮವಿಲ್ಲದಿರುವಿಕೆಯ)ಭಾವವು, ಬೇಸರ. ಘೋರ–ಭಯಂಕರವಾದ ಸಂಸಾರದುಃಖ (ವೆಂಬ ಮರದ ಬೇರನ್ನು ಸುಡುವ) ವನ್ನು ಪರಿಹರಿಸುವ, ಮೋಕ್ಷ ಕೊಡುವ. ಅಳ್ಕೆ (ಅಳುವಿಕೆ) ದುಃಖ.

53-54. ನಂದನೆಂಬ ಗೊಲ್ಲನಿಗೆ ಮಗನಾದವನೆ, ಗೊಲ್ಲತಿಯರ ಸಮೂಹಕ್ಕೆ ಪ್ರಿಯನಾದವನೆ, ದೈತ್ಯರನ್ನು ಕೊಂದವನೆ, ಭಕ್ತರಿಗೆ ಮುಕ್ತಿಯನ್ನು ಕೊಡುವವನೆ, ನುಗ್ಗಾದೆನು–ಪೂರ್ಣವಾಗಿ ತ್ರಾಣಕುಂದಿರುವೆನು. ಪೂರ್ಣ+ಇಂದು(ಚಂದ್ರ)+ಮುಖಿ (ಬಹುವ್ರೀಹಿ). ದೇವ+ಉತ್ತಮನು–ಕೃಷ್ಣನು. ತೆತ್ತು–ಒಪ್ಪಿಸಿಕೊಟ್ಟು. ಬದಕು–ಇರು. ವ್ರತ–ನಿಯಮ. ನಿಷ್ಠೆ–ಆಸಕ್ತಿ. ಸಮೇಳದ–ಸೇರಿಕೊಂಡು. ನೆತ್ತಸಾರಿಯ ಹರಹಿ (ಪಗಡೆಯ ಕಾಯಿಗಳನ್ನು ಹರಡಿ). ಹಾಸಂಗಿಯನು–(ಸಪ್ತಮ್ಯರ್ಥದ ದ್ವಿತೀಯೆ) ಪಗಡೆಯಾಟದ ಹಲಗೆಯಲ್ಲಿ. ದಾಳಿಸುತ–ಆಟವಾಡುತ್ತ. ತನ್ನ (ಯ) ಮೇಳದ–ಮಿತ್ರಕೂಟಕ್ಕೆ ಸೇರಿದ. ಹುಯ್ಯಲು–ಮೊರೆ. ಬಾಳುವೆಗಳ್ (ಈ ಪ್ರಯೋಗವು ತಪ್ಪು) ಮರ್ಯಾದೆಯು. ಕೋಳುಹೋದುವೆ–ಸೂರೆಯಾಯಿತೆ. ಲೋಲ–ಆಸಕ್ತ. ಹದನ–ಸಂಗತಿ. ಪಾಂಚಾಲೆಯು ಉಟ್ಟುಕೊಂಡಿರುವ ಆ ಸೀರೆಯನ್ನು ಎಳೆಯಲು, ಬಳಿಕ ಅದು ಅಕ್ಷಯ (ಸೆಳೆದಂತೆ ಒಂದರ ಕೆಳಗೆ ಇನ್ನೊಂದು ಉಂಟಾಗಿ ನಾಶ ಹೊಂದದಿರಲಿ) ಸೀರೆಯಾಗಲಿ. ಗದುಗಿನ ವೀರನಾರಾಯಣ–ಈ ಮುದ್ರಿಕೆಯು ಕವಿಯ ಇಷ್ಟದೇವತೆಯ ಹೆಸರು. ಛಂದೋಭಂಗವಾಗದಂತೆ ನಾರಾಯಣ ಪದವು ನಾರಯಣ ಎಂದಾಗಿದೆ.

54-55. **ಶ್ರೀ ಕೃಷ್ಣಸಂಧಾನ**:–ಸಂಧಾನವೊ, ಸಂಗ್ರಾಮವೊ—ಸಂಧಿಯೋ ಕಾಳಗವೋ? ನಯವೇನು–ಏತಕ್ಕೆ ಸುಮ್ಮನಿರುವೆ? ಮನ....–ಮನಸ್ಸಿನ ಕೋಣೆಯಲ್ಲಿ (ಅಂತರಂಗವಾಗಿ) ಬಚ್ಚಿಟ್ಟುಕೊಳ್ಳದೆ. ಘಟಿಸು–ಕೈಗೂಡಿಸು. ಕುರು....–ಕೌರವರ ಸಾಲಿನಲ್ಲಿ ನಾವೂ ಸೇರಿರುವಂತೆ ಮಾಡಿಸಿಕೊಡಬೇಕು. ಕೋವಿದ–ಬಲ್ಲವ. ಲಾವಕ–ನೀಚ. (ಕೌರವನು ಬಲ್ಲವನಾದರೂ ಅವನನ್ನು ಸುತ್ತುಬಳಸಿ ಯಾವಾಗಲೂ ಇರುವ ನೀಚರ ದುರ್ಬುದ್ಧಿಯಿಂದ ಕೆಟ್ಟಿರುವನು). 3ನೆ ಪದ್ಯ–ದ್ರೌಪದಿಯ ಆಗಮನವೇ ಮಳೆಗಾಲದಂತೆ ಕವಿಯಿಂದ ಬಣ್ಣಿಸಲಾಗಿದೆ. ಧಾರ್ತರಾಷ್ಟ್ರ (1. ಧೃತರಾಷ್ಟ್ರನ ಮಕ್ಕಳಾದ ಕೌರವರು. 2. ಕಪ್ಪು ಕೊಕ್ಕು ಕಾಲುಗಳುಳ್ಳ ಹಂಸಗಳು) ಪದದ

ಶ್ಲೇಷಾರ್ಥವನ್ನು ಪ್ರಯೋಗಿಸಿದ ಚಮತ್ಕಾರವನ್ನು ನೋಡುವುದು. ಬಳ್ಳಿಯಂತೆ ಸೂಕ್ಷ್ಮವಾಗಿ ಬಗ್ಗಿರುವ ಹುಬ್ಬುಗಳೇ ಕಾಮನ ಬಿಲ್ಲು; ಬಿಚ್ಚಿ ಕೆದರಿರುವ ಕರಿಗೂದಲ ರಾಶಿಯೆ ಕಾರ್ಮುಗಿಲು; ಕಡೆಗಣ್ಣಿನ ಹೊಳಪೇ ಕುಡಿಯಂತೆ ಬಗ್ಗುವ ಮಿಂಚು; ಪಾದಾಭರಣಗಳ ಧ್ವನಿಯೇ ಗುಡುಗು;–ಹೀಗಾಗಿ, ದ್ರೌಪದಿಯು ಆಗಮನವು ಮಳೆಗಾಲದಂತಿರಲು, ಆ ಮಳೆಗಾಲವನ್ನು ಹಂಸಗಳು ಸೈರಿಸಲಾರದೆ ಬೇನೆಬಿದ್ದು ಮಡಿಯುವಂತೆ, ಕೌರವರಿಗೂ ಅವಳ ಬರೋಣವು ಹಾಳೆನಿಸಿತು. ಅದರಲ್ಲೂ ದ್ರೌಪದಿಯೆಂಬ ವರ್ಷರ್ತುವು. ಪವನ (ಗಾಳಿ)+ಜ(ಮಗ) ಭೀಮನನ್ನು ಸೇರಿದುದರಿಂದ, ಭೀಮನೊಡನೆ ಸಂಧಾನಕ್ಕೊಡಂಬಡಲು ಎಂದೂ ಕೌರವರಿಗೆ ಅಸಾಧ್ಯವು. ಇದೊಂದು ತುಫಾನು ಎದ್ದಂತಾಯಿತು! (ಸಾವಯವರೂಪಕಾಲಂಕಾರ, ಪರಿಣಾಮಾಲಂಕಾರ, ಶ್ಲೇಷಾಲಂಕಾರ ಇವೆಲ್ಲವೂ ಸೇರಿವೆ) ಭ್ರೂ (ತ್ಸ) ಹುಬ್ಬು. ಕರಿದು (ಕಾರ್)+ಮುಗಿಲು. ಸಮೀರಕುಮಾರ, ಪವನಜ, ಅನಿಲಜ (ಅವಯವಾರ್ಥವೊಂದೇ). ಕಲಿ+ಮಲ–ಅಧರ್ಮವೆಂಬ ಹೊಲಸನ್ನು. ಕೈವಾರ–ಬೇಡುವಿಕೆ. ನೀತಿಯು ಬಳಸಿದ್ಯೆ–ಸಂಧಿಗೆ ಬಂದೆಯಾ? ಶಶಿ (ಚಂದ್ರ)+ಕುಲ(ವನ್ನು) ನರಕಕ್ಕೆ ಇಳಿಸಿದೆಯಾ? ಕ್ಷಾತ್ರಧರ್ಮದಂತೆ ಯುದ್ಧಕ್ಕೆ ಮೊದಲಾಗದೆ, ಬೇಡುವುದಕ್ಕೆ ಬಯಸಿ, ಪ್ರತಿಜ್ಞೆಗಳನ್ನು ಮರೆತು, ಕುಲವನ್ನೆ ನರಕದಲ್ಲಿ ಅದ್ದುವೆಯಾ?

55. ಭೀಮನಲ್ಲಿ ಹೇಗೆ ರೋಷವುಂಟಾಯಿತು? ನರಸತಿಯ ದುಃಖದಿಂದ ಹೊರಟ ಬಿಸುಸುಯ್ಲ–(ನಿಟ್ಟುಸಿರಿನ) ಗಾಳಿಯಿಂದ ಪ್ರಜ್ವಲಿಸಿ, ಭೀಮನು ಔಡು+ಒತ್ತಿದನು (ಹಲ್ಲು ಕಡಿದನು). ರಿಪು(ದುಶ್ಶಾಸನ); ಕರುಳದಂಡೆ–ಕರುಳಿನ ಸರ. ಶಾಕಿನಿ–ರಕ್ತಕುಡಿವ ಹೆಣ್ಣು ಪಿಶಾಚಿ. ಸಹ+ಉದರ (ತಾಯಿಯ ಉದರದಲ್ಲಿ ಸಮಾನತ್ವವುಳ್ಳವನು) ಕೌರವೇಂದ್ರ ...–ನಾನು ಕೌರವೇಂದ್ರನಿಂದ ಅವನ ಎರಡು ಊರು (ತೊಡೆ) ಗಳನ್ನು ನನ್ನ ಪ್ರತಿಜ್ಞೆಯಂತೆ ಕಸುಗೊಳ್ಳುವೆನು. (ಊರು–1. ಧರ್ಮರಾಯನು ಬೇಡಿದ ಐದೂರುಗಳು: 2. ಭೀಮನು ಮುರಿವೆನೆಂದ ಎರಡು ತೊಡೆಗಳು). ಸಂಪ್ರತಿ (ಸಂಧಾನ)–ವಿಗ್ರಹ (ಯುದ್ಧ) ಇವರೊಳಗೆ–ನಿಮ್ಮೊಳಗೆಯೆ ಒಮ್ಮತವಾಗದಿದ್ದಲ್ಲಿ. ಅವನಿ+ಈಶ. ನಾವ್+ಅಳುಕಿದವರು (ದುರ್ಯೋಧನನಲ್ಲಿಗೆ ತೆರಳಲು ಬೇಸತ್ತು ಹಿಂತೆಗೆವವರಲ್ಲಿ)+ಅಲ್ಲಿ. ವಿದಿತ–ನಿಶ್ಚಯ. ಹದುಳ–ಸಂಧಿ. ಉಚಿತ (ಯೋಗ್ಯ)×ಅನುಚಿತ. ವರಿಸಿ–ವಿಚಾರಿಸಿ ಆಯ್ದುಕೊಂಡು. ಐದೂರು (ದ್ವಿಗು).

56. ಬೀಳ್ಕೊಂಡು–ಅಪ್ಪಣೆ ಪಡೆದು ಹೊರಟು. ಪಾಳೆಯ–ಸೈನ್ಯದ ಬೀಡು. ಮಾಂಡಲೀಕ (ಚಿಕ್ಕ ಮಂಡಲ–ರಾಜ್ಯಗಳ ಅರಸು)ರಿಗೆ ಕೃಷ್ಣನ ದೌತ್ಯಕಾರ್ಯವನ್ನು ಕುರಿತಾಗಿ ಸಾರಲಾಯಿತು. ಮಂಗಳ....–ಶುಭಲಗ್ನದಲ್ಲಿ. ಜೋಕೆ–ಜಾಗ್ರತೆಯಾಗಿ ಲಗ್ನ ತಪ್ಪದಂತೆ. ನಿರ್ಗಮ ...–ಹೊರಡಲು ಸಿದ್ಧನಾದನು. ಹಳವಿಗೆ–ಧ್ವಜ. ಅಂಜಲಿ.

....-ಉತ್ತಮರಿಗೆ ಹಣೆಯ ಮೇಲೂ, ಮಧ್ಯಮರಿಗೆ ಎದೆಗೆ ಸರಿಯಾಗಿಯೂ, ಕನಿಷ್ಠರಿಗೆ ಹೊಕ್ಕುಳಿಗೆ ಸರಿಯಾಗಿಯೂ ಕೈಜೋಡಿಸಬೇಕೆಂಬ ನೀತಿಯಂತೆ. ನಳಿನ....-ಶ್ರೀಕೃಷ್ಣನ ದಿವ್ಯಮೂರ್ತಿಯನ್ನು ಕಂಡವರ ಕಣ್ಣೂ ಮನಸ್ಸೂ ಬೇರೇನನ್ನೂ ನೋಡಲಾರದೆಯೂ ಯೋಚಿಸಲಾರದೆಯೂ ಹೋಯಿತು. ಮುಳುಗಿ+ಮುಳುಗಿ (ವೀಪ್ಸಾಸಮಾಸ) ಎಡೆಬಿಡದೆ. ತವತವಗೆ (ಪರಸ್ಪರವಾಗಿ). ಗಂಗಾಪುತ್ರ (ಬಿಲ್ಲುವಿದ್ಯೆ ಕಲಿಸಿದ ದ್ರೋಣ) ಗುರು, ಕೃಪ, ಸೂರ್ಯಪುತ್ರ ಕರ್ಣ ಇತ್ಯಾದಿಯವರು. ಸಾರ....-ಉತ್ತಮವಾದ ವಸ್ತುಗಳನ್ನು. ಅವನಿಪ-ಧೃತರಾಷ್ಟ್ರ. ಕೌರವ....-ದುರ್ಯೋಧನನ ಅರಮನೆಯನ್ನು ಹೊರಗಿಟ್ಟು (ಹೋಗದೆ) ಭಾಗವತ (ಭಗವದ್ಭಕ್ತರಿಗೆ)+ಮಸ್ತಕರತ್ನ (ಶಿರೋಮಣಿ) ಹೀಗೇಕೆ ಮಾಡಿದನೆಂದರೆ ದೂತರು ತಾವು ಬಂದ ಕಾರ್ಯ ಕೈಗೂಡಿಸದೆ ಹಗೆಯಲ್ಲಿ ಉಣಲಾಗದೆಂದು ನೀತಿಯಿದೆ. (ವಿದುರನು ಕೃಷ್ಣನನ್ನು ಕಂಡಾಗಲೆ, ಅವನ) ಕರಣ—ದೇಹವು ನಿರ್ಮಲವಾಯಿತು. ಮನಸ್ಸು ಉಬ್ಬಿ ಸಂತೋಷಗೊಂಡುದು. ಆನಂದಾಶ್ರುವನ್ನು ಸುರಿಸುತ್ತ ಮೈಮರೆತನು. ಒಂದೇ ದೃಢವಾದ ಭಕ್ತಿಯಿಂದಾದ ಆತುರತೆಯಿಂದ ತನ್ನ ಮನೆಯಿಂದ ಅವನು ಹೊರಬಿದ್ದು, ತನ್ನಲ್ಲಿಗೆ ಇದಿರುಬರುತಲಿದ್ದ ನಾಶರಹಿತನಾದ ಕೃಷ್ಣನನ್ನು ಕಂಡನು.

57. ಸಿರಿಮೊಗ (ತ್ಸಃ ಶ್ರೀಮುಖ)-ಸುಂದರಮುಖದಲ್ಲಿ ಇಳಿವ ಸಣ್ಣ ಬೆವರು ಹನಿಗಳಿಂದಲೂ, ರಥದ ಕುದುರೆಗಳ ಗೊರಸುಗಳಿಂದೆದ್ದ ಕೆಂಧೂಳು ತಗಲಿದ ಸುಂದರ ತುರುಬಿನಿಂದಲೂ. ಕೆಂಪು+ಅಡರ್ದ (ಏರಿದ) ಅರುಣ (ಕೆಂಪು)+ರೇಣು (ಧೂಳು) ಖರಮರೀಚಿ (ತೀಕ್ಷ್ಣ ಪ್ರಕಾಶವುಳ್ಳ)-ಸೂರ್ಯ. ಜಳ-ಬಿಸಿಲು. ತರುಣ....-ಎಳೆಯ ತುಲಸಿಮಾಲೆಯಿಂದೊಪ್ಪುವ. ಗರುವದೇವ-ಗೌರವವೂ ಪೂಜ್ಯತೆಯೂ ಉಳ್ಳ ಕೃಷ್ಣ. (ಸ್ವಭಾವವು ಇದ್ದಂತೆ ಮನೋಹರವಾಗಿ ಬಣ್ಣಿಸುವುದೇ ಸ್ವಭಾವೋಕ್ತ್ಯಲಂಕಾರ). ಕಿರಿದು+ಬೆಮರ್. ಕೆಚ್ಚನೆ+ಧೂಳು. ಪುಳಕಜಲ-ಸಂತೋಷದ ಕಣ್ಣೀರು. ನಾರ (ಅವತಾರಗಳಲ್ಲಿ ಮನುಷ್ಯ ದೇಹವನ್ನು)+ಅಯನ (ಹೊಂದುವವನು)-ನಾರಾಯಣ. ದರ್ಶನದ(ಭೇಟಿಯ)+ಹರ್ಷ+ಅರಣ್ಯದಲಿ--ಸಂತೋಷವೆಂಬ ಕಾಡಿನಲ್ಲಿ ದಿಕ್ಕುಗೆಟ್ಟು ಅವನ ಬುದ್ಧಿಯು ಭ್ರಮೆಹೊಂದಿತು. ಯಾವಾಗಲು ಕುಮಾರರಂತೆ ಇರುವ ಬ್ರಹ್ಮನ ಮಾನಸಪುತ್ರರಾದ ಸನಕ ಸನಂದನ ಸನಾತನ, ಸನತ್ಸುಜಾತರೆಂಬುವರಿಗೂ ಒಮ್ಮೆಯೂ ಒಲಿಯದ ಮಹಿಮೆಯನ್ನು ತಳೆದಿರುವ ಕೃಷ್ಣನು ತನ್ನಲ್ಲಿ ಬಂದನೆಂದು ಹೊಂಗಿವನು (ಸಂತೋಷದಿಂದ ತುಂಬಿದನು). ಎಡೆ+ಆಡು-(ಅತ್ತಿತ್ತ ಓಡಾಡು). ವಿದುರನಿಗೆ ಹುಚ್ಚು ಹಿಡಿದಿದೆಯೆಂದು ಜನರು ಕೂಗಿಡುತಿದ್ದರು! ಈಡು+ಆಡು—(ಹರಿದು ಬಿಸಾಡು). ಗಾಢಿಕೆ-ಅತಿಶಯ. ಭಕುತಿ+ಕೇಳಿ-(ಭಕ್ತಿಯ ಆಟ). ಮಸಗಿ-ಅತಿಶಯವಾಗಿ). ಸುಗಿದು-ಕಿತ್ತು. ತಣಿವು-ತೃಪ್ತಿ. ಪ್ರಾರ್ಥಿಸಿದರೆ+ಒಲ್ಲದೆ-ಬೇಡಿಕೊಂಡರೂ ಒಪ್ಪದೆ. (ದುರ್ಯೋಧನನ ಮೃಷ್ಟಾನ್ನವನ್ನೂ ಬೇಡೆಂದು ಹೋದವನು

ವಿದುರನಲ್ಲಿ ತಣ್ಣೀರನ್ನೂ ಪಡೆಯಲಿಲ್ಲವೆಂದು ಕೌರವರು ನಗುವಂತೆ ಮಾಡಿ) ನಾಚಿಸಿ ದರೈ. (ಇದೆಲ್ಲವೂ ಸಂಸ್ಕೃತ ಮಹಾಭಾರತದಲ್ಲಿ ಇಲ್ಲವಾದರೂ, ವಿದುರನ ಗಾಢ ಭಕ್ತಿಯನ್ನು ತೋರಿಸಲು ಬರೆದ ಕನ್ನಡ ಕವಿಯ ಚಾತುರ್ಯವನ್ನು ನೋಡುವುದು).

58. ಶ್ರೀಕೃಷ್ಣನ ಒಲವ-(ಪ್ರೇಮವನ್ನು ಕುರಿತು), ಒರೆವೆ-ಹೇಳುವಿಕೆಯು ಆಶ್ಚರ್ಯಕರವು. ಹಾಲುಕಡಲಲ್ಲಿ ಮಲಗುವ ವಿಷ್ಣುವು ವಿದುರನಲ್ಲಿ ಒಂದು ಕುಡಿತೆ ಹಾಲಲ್ಲಿ ತನ್ನ ಹಸಿವನ್ನು ನೂಕಿದನು. ಹೊಲಬು....ತನ್ನ ಅರಿಕೆ....-ತನ್ನನ್ನು ತಿಳಿದುಕೊಳ್ಳುವುದಕ್ಕೆ ನಿಗಮ (ವೇದ)ಗಳು ಮಾಡುತಿದ್ದ ಪ್ರಯತ್ನಗಳ ದಿಕ್ಕನ್ನೆ ಕೆಡಿಸಿ ದನು,—ಎಂದರೆ ಅವನು ವೇದಗಳಿಗೂ ಅಗೋಚರನು. (ಭಕ್ತನಲ್ಲಿದ್ದ) ಕರುಣೆಯ ಘನತೆ (ಅತಿಶಯವು),-ವೇದಗಳಿಗೂ ತಿಳಿಯಲಾರದವನು ಸಾಮಾನ್ಯನಾದ ವಿದುರ ನಲ್ಲಿಗೂ ಬಂದನು! ಒಕ್ಕುಡಿತೆ (ದ್ವಿಗು). ರಾಗ (ಸಂತೋಷ)+ಸಂ+ಉದಯ- ಮಿತ್ರನು. (ಸಂತೋಷವನ್ನು ಉದಯಿಸುವವ) ಆತ....-ಆ ದುರ್ಯೋಧನನು ಆಗ ತೋರಿಸುವ ತನ್ನ ಗುಣಗಳ ಬೆಳವಿಗೆಯಿಂದಲೇ, ಸಂಧಾನಕ್ಕೊಡಂಬಡುವನೊ ಇಲ್ಲವೊ ಎಂಬುದನ್ನು ತಾನಾಗಿ ನಿಶ್ಚಯಿಸಿಕೊಳ್ಳುವೆನು. ಗುಣ (ಸತ್ ಅಥವಾ ದುರ್). ಬೆಳವಿಗೆ-ಅತಿಶಯ. ಹವಣು (ಪ್ರಮಾಣ. ತ್ಸ). ತಾಗು-ಜಗಳದಲ್ಲಿ ಕೈಗೆ ಕೈ ತಾಗು ವುದು. ಬಾಗು-ಸಂಧಾನಕ್ಕೊಡಂಬಡು. ಕುರುಕುಲವೆಂಬ ಮಹಾಸಾಗರದಲ್ಲಿಯೆ ಹುಟ್ಟಿದ ಕೌರವನೆಂಬ ವಡಬಾನಲನು ಅದೇ ಸಾಗರವನ್ನು ಬತ್ತಿಸತಕ್ಕವನು-ದುರ್ಯೋ ಧನ. ಮೂರ್ಖರಿಗೆ+ಮೌಳಿ (ತಲೆ), ಶ್ರೇಷ್ಠನು. ಅವಸರ-ಅವಕಾಶ. ಆಳಿಕಾರ (ವಂಚಕ ಅಥವಾ) ಆಳಿ-ಸ್ನೇಹ, ಪಾಂಡವರೊಡನೆ ಸ್ನೇಹವನ್ನು ತೋರಿಸುವಾತನು. ಬೇಹ-ಬೇಡುವ. ಬೇಹಿನ ಭಟರೆಂದು ಗುಪ್ತಚಾರರಿಗೂ ಹೆಸರಿದೆ. ವೀಳೆಯ (ತ್ಸ) ವೀಟಿಕಾ. ವೀಳೆಯವನ್ನು ಕೊಡುವುದು ಅಪ್ಪಣೆಯ ಸಂಚಿಕಾರ. ಹರಿದುದು— ಮುಗಿದು ಸಭಿಕರು ಹೊರಟರು. ಜಾಳಿಸುತ (ಪರಿಹರಿಸಿ) ತಮ (ಕತ್ತಲೆಯನ್ನು) ಸೂರ್ಯನು ಮೂಡಣ ಬೆಟ್ಟದ ಮೇಲೆ ಮೂಡಿದನು.

59. ಕೈತವದ (ಕಪಟತನದ)+ಶಿಕ್ಷೆ(ಅಭ್ಯಾಸಕ್ಕೆ)+ಗುರುವಾದ. (ಹಂಸ ಡಿಬಿಕರನ್ನೂ, ಕಾಲಯವನನನ್ನೂ, ಕಂಸನನ್ನೂ ಕೃಷ್ಣನು ಕಪಟತನದಿಂದ ಕೊಂದ ನೆಂದು ದುರ್ಯೋಧನನು ಹೀಗೆನ್ನುವನು) ಹರಿಯ ಬಿಡು-ಹೋಗಗುಡು. ಹರಿ-ಕೃಷ್ಣ, ಪಾಯು. ಹರಿತಂದು-ಬೇಗಬಂದು. ವೈಯಿಕ್ಕಿ-ನಮಸ್ಕರಿಸಿ. ಕರಪುಟ+ಅಂಜಲಿ- ಎರಡೂ ಕೈಗಳ ಒಳಭಾಗವನ್ನು ಕೂಡಿಸಿ ಮಾಡಿದ ಅಂಜಲಿ. ನೊಸಲಲಿ....-ತಲೆಯ ಮೇಲೆ ಕೈಜೋಡಿಸಿ ವಿಜ್ಞಾಪಿಸಿದರು. ದೇವರ (ಪೂಜ್ಯನಾದ ದುರ್ಯೋಧನನಿಗೆ) ಅವ ಕಾಶವಿದೆ, ಈಗ ಬರಬಹುದು. ರಾಜಿ(ಕೇಸರಗಳ ಪಂಕ್ತಿಯುಳ್ಳ)ೀವ-ಕಮಲ. ದುರ್ಯೋಧನನು ಕೃಷ್ಣನಿಗೆ ಭಾವನು. (ಹೇಗೆ)? ರಾವಣ....-ಇವನೂ ರಾವಣನಂತೆ

ಮೂರ್ಖನು. ಹಟವಾದಿಯಾಗಿ ತನ್ನದೆಲ್ಲವನ್ನೂ ನಾಶಪಡಿಸಿಕೊಳ್ಳುವನು. ನಯ (ನೀತಿ)+ಅವಿಳನು (ಕೆಟ್ಟವನು). ಉಕ್ತಿಕೊಳ್ಳದು-ಮಾತು ನಡೆಯದು. ಕೌರವ ವಾರಿಧಿಯ-ಕೌರವ ವಂಶವೆಂಬ ಸಾಗರವನ್ನು ಕುಡಿವುದಕ್ಕಾಗಿ [ಕೃಷ್ಣನು, ನಾರಾಯಣನು, ಪದ್ಮನಾಭನು, ಭೂಭಾರ ಹರಣಕ್ಕಾಗಿ ಮನುಜ ವೇಷದಲ್ಲಿ ಬಂದನೆಂದೂ, ದುಷ್ಟರಾದ ರಾಕ್ಷಸರನ್ನು ಕೊಂದಂತೆಯೆ ದುರ್ಯೋಧನನ ತಲೆಯನ್ನು ಕತ್ತರಿಸುವನೆಂದೂ, ಅದಕ್ಕಾಗಿ ಜಗಳವನ್ನು ಹೂಡುವುದಕ್ಕೆ ಬಂದನೆಂತಲೂ ಈ ಪದ್ಯವು ಪೂರ್ವ ಸೂಚನೆ ಹೇಳುವುದು]. ಸಮರ(ಯುದ್ಧ)+ವಿದ್ಯೆಯನ್ನು ಸರ್ವಜ್ಞ (ಪೂರ್ಣ ತಿಳಿದವರು) ರಾದ ಭೀಷ್ಮ, ದ್ರೋಣಾದಿಗಳು. ಅಂಘ್ರಿಗೆ-ಚರಣಕ್ಕೆ ಪ್ರಣಮಿಸಿದರು. ಬಹಳ....-ಒಡ್ಡೋಲಗದ ಸಂಭ್ರಮವೆಂಬ ಲಕ್ಷ್ಮಿಯೇ ಕೈಜೋಡಿಸಿ ನಮಸ್ಕರಿಸುತಿದ್ದಿತು. ಕಮಲ....-ಇವನೇ ನಾರಾಯಣನಾಗಿರಬಹುದಾದರೂ ನಮಗೇನು ಮಾಡಬಲ್ಲನು?

60. ಸೆಣಸು (ಅಹಂಕಾರದಿಂದ ಸಿಟ್ಟೆಬ್ಬಿಸುವಿಕೆಯು)+ಸೇರದ (ತಗಲದ, ಮೆಚ್ಚದ)+ದೇವನ+ಇದಿರಲಿ+ಮಣಿಯದ (ನಮಸ್ಕರಿಸದ). ಅಂಗುಟ(ಅಂಗುಷ್ಠ-ತ್ಸ) ಹೆಬ್ಬೆರಳು. ಮಣಿಖಚಿತ-ರತ್ನಖಚಿತ. ಗೊಣಸು (ಕೊಂಡಿ) ಮುರಿಯಿತು. [ಸಿಂಹಾಸನವು ಎಂದೂ ಮೊಗಚಿಬೀಳದಂತೆ ಅದನ್ನು ಬೆಸಿಗೆಮಾಡಿಟ್ಟ ಮತ್ತೊಂದು ಬಂಧನವನ್ನಾದರೂ ಈಗ ಮುರಿದಂತಾಯಿತು!] ಕವಿಯು,-ದೇವತೆಗಳು 'ಅ!' ಎಂದರೆಂದು ಚಮತ್ಕಾರವಾಗಿ ಹೇಳುವನು. ಕವಿದು-ಮೊಗಚಿ. (ಗರ್ವಭಂಗ!) ಧರಣಿಪತಿ...-ಅರಸೆಂದು ಹೆಮ್ಮೆಯಿಂದ ಇದ್ದುದಕ್ಕೆ ಈಗ ನೆಗೆದು ಬಿದ್ದುದರ ಪರಿಹಾಸ್ಯವು! [ಸಂಸ್ಕೃತ ಮಹಾಭಾರತದಲ್ಲಿ,-ದುರ್ಯೋಧನನು ತಾನೆ ವಿದುರನಲ್ಲಿಗೆ ಬಂದು ಕೃಷ್ಣನನ್ನು ಉಪಚರಿಸಿ ತನ್ನಲ್ಲಿಗೆ ಸಂಭ್ರಮದಿಂದ ಬರಮಾಡಿಕೊಂಡನೆಂದು ಹೇಳಿದೆ. ಈ ಕವಿಯು ಹೀಗೆ ದುರ್ಯೋಧನನ ಗುಣನಿರೂಪಣೆಗೆ ಕೂಡಿಸಿ ಬರೆದಂತೆ ಹೇಳುವನು] ಅಗ್ರ (ಮುಂದೆ)+ನಿ(ಹೋಗುವವರು)-ಶ್ರೇಷ್ಠರು. ಕೈಕುಡಲು (ಕ್ರಿಯಾಸಮಾಸ). ಕೇಸರಿ-ಸಿಂಹ. ೨೭ನೆ ಪದ್ಯ. ಹಿಮ+ಅಂಶು (ಹಿಮಕಿರಣನಾದ) ಚಂದ್ರನು, ತನ್ನ ಕುಲ (ಚಂದ್ರಕುಲ)ದಲ್ಲಿ ವನದಂತೆ ಬೆಳೆದ ಮೂರ್ಖತನದ ಕಗ್ಗತ್ತಲೆ (ಹೃದಯ+ಅಂಧಕಾರ)ಯನ್ನು ನಿವಾರಿಸುವುದಕ್ಕಾಗಿ, ಮೂಡಿಸಿದ ಎಳೆಯ ಬೆಳದಿಂಗಳೊ ಇದು ಎನ್ನುವ ಹಾಗೆ, (ಸುರ+ರಿಪು+ಅಂತಕ) ದೇವತೆಗಳ ಹಗೆಗಳನ್ನು ವಿನಾಶಗೊಳಿಸುವ ಕೃಷ್ಣನ ಹೊಳೆವ ಹಲ್ಲುಗಳ ಪ್ರಕಾಶವು ಹರಡುವ ಹಾಗೆ, ಅವನು ಈ ರೀತಿ ಭಾಷಣಮಾಡಿದನು. ಆಗ ಆ ಸಭೆಯೆಂಬ ಸಮುದ್ರದಲ್ಲಿ ಸುಳಿಯಂತೆ ಸುತ್ತುತಿದ್ದ ತೆರೆಗಳ ಸಮೂಹವು ಅಡಗಿತು; ಕೃಷ್ಣನು ಚಂದ್ರಕುಲದಲ್ಲಿ ಮೂರ್ಖರಾಗಿ ಬೆಳೆದ ಕೌರವರ ಹೃದಯಗಳು ಜ್ಞಾನಹೊಂದುವಂತೆ ಭಾಷಣ ಮಾಡತೊಡಗಲು, ಆಗಲೆ ಎಲ್ಲರೂ ಮೌನರಾದರು.

1. ಉತ್ಪ್ರೇಕ್ಷೆ–2. ರೂಪಕ. 1. ಸಾಮ್ಯವಿರುವದರಿಂದ ಒಂದನ್ನು ಮತ್ತೊಂದಂತೆ ಊಹಿಸಿದುದು; 2. ಹೋಲುವೆಯನ್ನು ಹೇಳದೆ ಉಪಮಾನವನ್ನೆ ಉಪಮೇಯವಾಗಿ ಹೇಳುವುದು]. ಘಟನಾ(ತ್ನ)ಗಡಣ. ೨೮ನೆ ಪದ್ಯ–ವನವಾಸ ಮತ್ತು ಅಜ್ಞಾತವಾಸ ಗಳ ಅವಧಿಯು (13 ವರ್ಷ) ಮುಗಿಯಿತು. ನವೆದರು (ಕಷ್ಟಪಟ್ಟರು). ಅಧ್ರುವದ (ಸ್ಥಿರವಲ್ಲದ). ಪುರುಷ+ಅರ್ಥ–ಧರ್ಮ, ಅರ್ಥ, ಕಾಮ; ಮೋಕ್ಷವೆಂಬ ನಾಲ್ಕನ್ನು ಮನುಷ್ಯನಾಗಿ ಹುಟ್ಟಿದವನು ಸಾಧಿಸಬೇಕಾದುದು. ಸಂಚಿಸು–ಸೇರಿಸು. [ಮನುಷ್ಯನು ಸ್ಥಿರವಾಗಿ ಜೀವಿಸುವಂತವನಲ್ಲ; ಆದುದರಿಂದ, ನ್ಯಾಯವಾಗಿ ನಡೆದು, ನ್ಯಾಯವಾಗಿ ದುಡಿದು, ನ್ಯಾಯವಾಗಿ ಸುಖಾನುಭವಹೊಂದಿ, ತಿರುಗಿ ಜನ್ಮಕ್ಕೆ ಬಾರದಂತೆ ಪುರು ಷಾರ್ಥಗಳನ್ನು ಸಂಗ್ರಹಿಸಬೇಕಲ್ಲದೆ, ಪರರ ಸೊತ್ತನ್ನು ಅಪಹರಿಸುವುದಕ್ಕೆ ಎಣಿಸ ಬಾರದು].

60-61. **ಸಪ್ತಾಂಗಗಳು:**—ಭಂಡಾರ, ಬಲವಾದ ಸೇನೆ, ತಂತ್ರ, ವಿಸ್ತಾರ ವಾದ ದೇಶ, ಕೋಟೆ, ಮಂತ್ರಿ, ಮಿತ್ರರಾಜರು. ಇವು ರಾಜನನ್ನು ಕವಚದಂತೆ(ಅಂಗ) ಕಾಪಾಡುವುವು. ಪಾಂಡವರೆಂಬ ಮಿತ್ರರನ್ನು ಬಿಟ್ಟರೆ ಒಂದಂಗವು ಕಡಿಮೆಯಾಗು ವುದು. ಇಂದ್ರಪ್ರಸ್ಥ(ಢಿಲ್ಲಿಗೆ ಬಳಿಯಲ್ಲಿ). ಕುಳ (ಎಡಬಲಕ್ಕಿರುವ ಉಪನಗರಗಳ ಸಹಿತ. ಪಾಂಡವರ ಪ್ರತಿಷ್ಠೆಗೆ (ಏಳಿಗೆಗೆ) ಆಚಾರ್ಯನು (ಗುರು, ಕಾರಣನು). ನಿನ್ನ) ಒಡನೆ ತಲೆ ಎತ್ತುವ (ಜಗಳಾಡುವ) ಅರಸರು ಇನ್ನಿರರು. ಈಗ ಕರ್ಕಶ (ಕಿವಿಗೆ ಕಠಿನ) ವಾದರೆ. (ಕೃಷ್ಣನ ಮಾತುಗಳನ್ನು) ಕಿವುಡು ಕೇಳುತ್ತ (ಕಿವುಡನಂತೆ ಅಲಕ್ಷ್ಯ ದಿಂದ ಕೇಳುತ್ತ). ಆಲಾಪ–ಭಾಷಣ. ಪಾಂಡವರ....–ಪಾಂಡವರಿಗೆ ರಾಜ್ಯವನ್ನು ಕೊಡಿಸಿ ಸುಖವನ್ನುಂಟುಮಾಡುವೆನೆಂಬ ಯೋಚನೆಯನ್ನು ಬಿಡು. ಕರ್ಣಕ್ಕೆ....–ಇನ್ನೂ ಸಿಟ್ಟೇಳುವಂತೆ ಆ ಮಾತುಗಳಂಥವನ್ನು ಆಡದಿರು. ಅವರು....–ಪಾಂಡವರು ನಮ್ಮೊಡನೆ ವಿನೋದಕ್ಕಾಗಿ ನಿನ್ನನ್ನು ರಾಯಭಾರಿಯನ್ನಾಗಿ ಕಳುಹಿಸಿರುವರಲ್ಲದೆ ನಿನಗೆ ರಾಜಕಾರ್ಯವನ್ನು ನಿಜವಾಗಿಯೂ ಯೋಚಿಸಿ (ನಿಯಮಿಸಿ) ಕಳುಹಿದ್ದರೂ ನಾನದನ್ನು ಒಪ್ಪುವವನಲ್ಲ. ಬವರ–ಯುದ್ಧ. ಪಾಂಡವರಾದರೇನು, ನೀವಾದರೇನು, ಯಾರೇ ಆದರೂ ಯುದ್ಧದ ಸುದ್ದಿಯನ್ನೆತ್ತಿರಿ, ಹೊರತು ಬೇರೆ ಮಾತಿನಿಂದ ಉಪ ಯೋಗವಿಲ್ಲ.

61-62. ಮಾವ (ದ್ರುಪದ). ಸಖ್ಯ–ಸ್ನೇಹ. ಮಮ....–ನಿಶ್ಚಯವಾಗಿಯೂ ನನ್ನ ಪ್ರಾಣರು ಎನ್ನುವಿರಿ. ಅಚ್ಚುಮೆಚ್ಚಿನವರಾಗಿ, ಯಾವಾಗಲೂ ಕಾಪಾಡಲ್ಪಡಲು ಯೋಗ್ಯರಾಗಿರುವವರು. (ಹೀಗೆ ಬಲವಾದ ಸಹಾಯವುಳ್ಳ ಪಾಂಡವರಿಗಾಗಿ ಸಂಧಿ ಮಾಡಿಕೊಳ್ಳೆಂದು ನನ್ನನ್ನು ನಾಚಿಸಬೇಡ). [ಬಲವಂತನು ಬಲಹೀನರನ್ನು ಬೇಡಿ ಕೊಳ್ಳುವುದು ಅವರನ್ನು ಹಿಯ್ಯಾಳಿಸುವುದಕ್ಕೆಂದು ತಾತ್ಪರ್ಯ]. ೩೪. ಪವ+ಇಪುದೊ

(ಪದವಿ ಇರುವ್ರದೊ!) ಪರಮಪುರುಷನು (ವಾಸ್ತವಿಕವಾಗಿ ನೀನು ಪರಮಾತ್ಮ ಸ್ವರೂಪಿಯು) ದೊಡ್ಡವನಯ್ಯಾ ನೀನು! ಬಂದಂತೆ ತೊಲಗುವುದು! [ಲೋಕೋಕ್ತ್ಯಲಂಕಾರ: ವಾಡಿಕೆಯಾಗಿ ಲೋಕದಲ್ಲಾಡುವ ರೂಢಿಯ ಮಾತನ್ನೆ ಆಡುವುದು]. ವಿರೋಚನ ಪುತ್ರನಾದ ಬಲಿಯು ಇಂದ್ರಾದಿಗಳನ್ನೋಡಿಸಿ, ಸ್ವರ್ಗರಾಜ್ಯವನ್ನೂ ಆಕ್ರಮಿಸಿ, ರಾಜ್ಯಾಧಿಪತ್ಯ ನಡೆಸುವಾಗ, ಇಂದ್ರನ ತಾಯಿಯಾದ ಅದಿತಿಯ ಗರ್ಭದಲ್ಲಿ ವಿಷ್ಣುವು ವಾಮನ (ಕುಳ್ಳ ಬ್ರಹ್ಮಚಾರಿ) ನಾಗಿ ಹುಟ್ಟಿ, ಬಲಿಯ ಯಜ್ಞಶಾಲೆಗೆ ಬಂದು, ಅವನಿಂದ ಮೂರಡಿ ನೆಲವನ್ನು ದಾನವಾಗಿ ಬೇಡಿ, ಉದಾರಿಯಾದ ಬಲಿಯಿಂದ ಇದನ್ನು ಪಡೆದು, ಕೂಡಲೆ ತಾನು ತ್ರಿವಿಕ್ರಮಮೂರ್ತಿಯಾಗಿ ಬಳೆದು, ಭೂಮ್ಯಾಕಾಶಗಳನ್ನು ಎರಡು ಅಡಿಗಳಲ್ಲೇ ಅಳೆದು ಮೂರನೆಯ ಅಡಿಗಾಗಿ ಬಲಿಯ ತಲೆಯನ್ನೆ ಮೆಟ್ಟಿ ಒತ್ತಿದನೆಂದು ಪೂರ್ವಕಥೆ—[ಆರ್ಯಮತೋಪಾಖ್ಯಾನ]. ಸ್ಥಳ—ಊರು. ಪಾದವ ಮೆಟ್ಟಲು (ಊರುವುದಕ್ಕೂ) ಕೊಡೆನು ಕೈವಾರ—ಪ್ರಾರ್ಥನೆ. ಉಚ್ಚಳಿಪ—ಊರುವ. ಮುಳ್ಳಿನ ತುದಿಯನ್ನು ಸಹ ಚುಚ್ಚುವಷ್ಟು ಸ್ಥಳವನ್ನಾದರೂ ಕೊಡೆನು. ಬನಬನಕೆ ತೊಳಲ್ವುದು–ಕಾಡಿನಿಂದ ಕಾಡಿಗೆ ತಿರುಗುವುದು. ಮುನಿಗಳನು ಬೋಳುಗಳ–ಋಷಿಗಳನ್ನೂ ಸನ್ಯಾಸಿಗಳನ್ನೂ. ಎಡೆ–ಆಶ್ರಯ. ಹಕ್ಕೆ-ಹಾಸುಗೆ. ನಡು....–ಶೇಷನ ಮೈಯೆಂಬ ಹಾಸುಗೆಯನ್ನು ಬಿಟ್ಟು. ಮನಕತವ....–ಮನಸ್ಸಿನ ವಿರೋಧ ಭಾವವನ್ನು ಸಮಾಧಾನಪಡಿಸಲು.

62-63. ಶೂರನೆಂಬ ಯಾದವನ ವಂಶದಲ್ಲಿ ಹುಟ್ಟಿದವನು ಶೌರಿ, ಕೃಷ್ಣನು. ಮಣಿಯದ (ಬಗ್ಗದ) ಮತಗುಡದ (ಒಪ್ಪದ) ಫಣಿ (ಸರ್ಪ-ಹೆಡೆಯುಳ್ಳುದು)+ಕೇತನ ಧ್ವಜವುಳ್ಳವನು,—ದುರ್ಯೋಧನ. ಸಿಂಧು (ನದಿ) ಹೊಳೆ. ವ್ಯತಿಕರ—ಕೇಡು. ಭೂಷನ....–ಅವನ ಹೆಂಡತಿಯ (ಭಾನುಮತಿ) ಕಿವಿಯೋಲೆಯು ತ್ವರೆಯಲ್ಲಿ ನಾಶವಾಗುವುದು. [ಹೇಳಬೇಕಾದುದನ್ನು ವಿಶೇಷ ರೀತಿಯಿಂದ ಹೇಳುವುದು ಪರ್ಯಾಯೋಕ್ತ್ಯಲಂಕಾರ] ಮೊಗನೋಡು (ಕ್ರಿ. ಸ.) ಸೌಬಲ—ಶಕುನಿ. ಕು (ಕೆಟ್ಟ, ದುಷ್ಟ)+ಮಂತ್ರ (ಆಲೋಚನೆ)–ಕುಯುಕ್ತಿ. ಬೊಪ್ಪ (ಮಹಾರಾಷ್ಟ್ರ ಭಾಷೆಯಿಂದ) ತಂದೆ. ಖಾತಿ–ಸಿಟ್ಟು. ಕೈ(ಯಲ್ಲಿಯೂ) ಮನ(ಸ್ಸಿನಲ್ಲಿಯೂ ಸಮರ್ಥರಾ)ದ ಕಲಿ (ವೀರರು)ಗಳು-ವೀರರೂ ನಿಪುಣರೂ. ಗುಜುಗುಜು—ಮೆಲ್ಲನೆ ಮಾತನಾಡು. ನೊರಜು–ಕ್ರಿಮಿ. ಕುಲಗಿರಿ (ಮಹೇಂದ್ರ, ಮಲಯ, ಸಹ್ಯ, ಶುಕ್ತಿಮತ್, ಋಕ್ಷ, ವಿಂಧ್ಯ, ಪಾರಿಯಾತ್ರ ಇವೇಳು) ಮಹಾಪರ್ವತಗಳು. ತೆರಳು–ಹಿಂತಿರುಗು. [ದೃಷ್ಟಾಂತಾಲಂಕಾರ] ಹೊದರು–ಸಮೂಹ, ಹುರಿಕೊಂಡಂತೆ–ಸೇರಿದಂತೆ. ರವಿಶತ....–ಕೃಷ್ಣನು ಮೈಮುರಿದು ನಿಂತೊಡನೆಯೆ ನೂರಾರು ಸೂರ್ಯರ ತೇಜಸ್ಸುಳ್ಳವನಾದನು. ತೇಜದಲಹರಿ ಪ್ರಕಾಶದ ತರೆ; ಕಿರಣಸಮೂಹ. ಹೊದೆದು—ವ್ಯಾಪಿಸಿ-ವಿಶ್ವ(ಪ್ರಪಂಚವೇ ತಾನೆಂಬ)ರೂಪ. (ಕಂಡಲೆಲ್ಲ ಕೃಷ್ಣಮಯವಾಯಿತು.)

63-64. ಬಾಹ್ಯ—ಹೊರಗೆ. ಬಳಕೆ—ಇರುವಿಕೆ. ತಾನಲ್ಲದೆ ಬೇರೆ ಯಾವುದೂ ಇಲ್ಲವೆಂಬಂತಿರಲು. ವಿಶ್ವರೂಪವನ್ನು ಕಂಡು ಧೃತರಾಷ್ಟ್ರನು ಬೆದರಲು, ಕೌರವನು,—ಹೃದಯವೇ—ಇದು ಅವನ ಅಂತರ್ಯದ ಅಭಿಪ್ರಾಯವೇ? (ಅಲ್ಲವೆಂದು ತಾತ್ಪರ್ಯ) ಅಂತರ್ಯಾಮಿ (ಒಳಗೆ ಸಂಚರಿಸುವವನು)—ಆತ್ಮನು, ನಿಶ್ಚಯವಾಗಿಯೂ ಸರ್ವ ಪ್ರಾಣಿಗಳಲ್ಲಿ ಇವನೇ ಇರುವವನು. ಒಲವುದು—ಬದುಕಿದೆ. ಮಣಿದು—(ಹಗೆಗಳಿಗೆ) ಮರೆಹೊಕ್ಕು. ಸೆಣಸಿ—ಜಗಳಕ್ಕೆ ಕೈಯಿಕ್ಕಿ ಹಿಂದೆಗೆವವನಲ್ಲ. ಅಳುಪು—ಆಶೆ ಇಡು. ಅಳುಕು—ಹೆದರು. ರಣ....—ಯುದ್ಧವೆಂಬುದೇ ನನಗೆ ಬೇಕಾಗಿರುವ ಮಹಾನಂದವು. ವಹಿಲದಲಿ—ತ್ವರೆಯಾಗಿ. ಕೈವಲ್ಯ—ಮೋಕ್ಷ. ಘನ....—ಸಮರ್ಥನಾದ ದುರ್ಯೋಧನನಿಗೂ ಪಾಂಡವರಿಗೂ(ಒಂದೇ ಕುಲದ ಸೋದರರುಗಳೊಳಗೆ) ನಡೆದ ಈ ವಿವಾದವು, ಬರೇ ರಾಯಭಾರಿಯಾಗಿ ಬಂದಿರುವ ನನಗೇತಕ್ಕೆ ಬೇಕಾಗಿದೆ?

64-65. **ಶಕುನಿಯ ನೀತಿ:**—ಆಳ—ಜನರ. ಸೆಣಸಿನ ಕಾಲುಮೆಟ್ಟು—ಜಗಳಾಟದ ಮುಂದುವರಿಕೆ. ಸೂಳುಮತ್ಸರ—ದಿನೇ ದಿನೇ ಹೆಚ್ಚುವ ಮತ್ಸರ. ಬಿರುದು ಪಾಡಿನ—ಕೀರ್ತಿ ಹೊಗಳಿಕೊಳ್ಳುವ. ಚೂಳಿ+ಕಲಹ—ಬಾರಿಬಾರಿಗೂ ನಡೆವ ಯುದ್ಧ. ಕದಡು—ಗದ್ದಲ. ಜೂಜು—ಶಪಥ. ತೋಳುಬಲರ+ಒಳತೋಟಿ—ಬಲಶಾಲಿಗಳೊಳಗೆ ನಡೆವ ಹೋರಾಟ. ಮಸಗು—ಹೆಚ್ಚುತ್ತಿರು. ಏಕಾಂತದಲಿ—ಗುಟ್ಟಾಗಿ. ಆದ್ಯರು—ಮೊದಲಾದವರು. ಅಂದು(ದ್ರೋಣನಿಗೆ ಗುರುದಕ್ಷಿಣೆಯನ್ನು ಸಲ್ಲಿಸಿದಂದು, ಆರ್ಯಮತೋಪಾಖ್ಯಾನ—ದ್ರುಪದನ ಕಥೆ) ಸಂದರು—ಕೀರ್ತಿಹೊಂದಿದರು. ಪರಿಭವ—ಅಪಜಯ. ವನಜವನ—ಕಮಲಗಳ ತೋಟ. (ಕಮಲಾಕರ). ತುರುಚೆ—ಮುಟ್ಟಿದರೆ ಕೈ ತುರಿಸುವ ತುರಿಕೆಯ ಕಾಡುಗಿಡ. ಬನ(ತ್ತ)ವನ. ಕಡಸಿಗೆ—ಕಹಿಜಾತಿಯ ಗಿಡ. ಚೂತ—ಮಾವು. ಬೊಬ್ಬುಲಿ—(ಕೆಲವರು)ಬೂರುಗದ ಮರ(ವೆನ್ನುವರು); ಕಾಡುಬಳ್ಳಿ. ಇನಿತು—ಅರ್ಜುನನಲ್ಲಿ ಇಷ್ಟು ಇಲ್ಲ. ಯಮಳರು—ಅವಳಿ ಹುಟ್ಟಿದವರು. ಜಿನುಗು—ಅಲ್ಪಪರಾಕ್ರಮ. ಜಾರೆನು—ಹಿಮ್ಮೆಟ್ಟೆನು. [ದೃಷ್ಟಾಂತಾಲಂಕಾರ] ಇವನೊಡನೆ—ಭೀಮನೊಡನೆ. ಹುದು—ಸ್ನೇಹ. ಕೈ ಕಟ್ಟುವುದು—ಉಂಟಾಗುವುದು. ಹಿರಿದು+ಬಲ. ಅರಳೆಯ ಹಾಸು—ಹತ್ತಿಯ ಮೃದು ಹಾಸುಗೆ. ನವ ವಿಷ [ಹೊಸ—ಅಥವಾ—ಕಾಕೋಲ, ಕಾಲಕೂಟ, ಹಲಾಹಲ, ಸೌರಾಷ್ಟ್ರಿಕ, ಶಾಕ್ತಿಕೇಯ, ಬ್ರಹ್ಮಪುತ್ರ, ಪ್ರದೀಪನ, ದಾರದ, ವತ್ಸನಾಭ ಎಂಬ ಒಂಭತ್ತು ವಿಷಗಳು.] ಉದರದೀಪನ ಚೂರ್ಣ—ಹಸಿವು ಹೆಚ್ಚಿಸುವ ಔಷಧದ ಪುಡಿ. ಸಾಪತ್ನನಲಿ—ಹಗೆಯಾದ ಭೀಮನಲ್ಲಿ. ಪದರವ ಕಾಣೆ—ಬಲಹೀನತೆ ತೋರಿದುದಿಲ್ಲ. (ರೂಪಕ.) ಭೀಮನನ್ನು ಕೊಲ್ಲಲು, ಕೌರವರು ಅವನನ್ನು ನದಿಯಲ್ಲಿ ಹೊತ್ತು ಬಿಸುಡಿದರೆ, ಅದು ಅವನಿಗೆ ಮೃದುತಲ್ಪದಂತಾಯಿತು; ವಿಷವುಣಿಸಿದರೆ ಅದರಿಂದ ಅವನ ಹಸಿವೇ ಹೆಚ್ಚುವಂತಾಯಿತು. [ನಿಷದ

ಲಡ್ಡುಗಳನ್ನು ಉಣಿಸಿ, ಮೂರ್ಛೆಗೊಳಿಸಿ ಭೀಮನನ್ನು ನದಿಗೆ ಒಗೆದರೆ, ಅವನು ಪಾತಾಳಕ್ಕಿಳಿದು, ಸರ್ಪಗಳ ಕಡಿತದಿಂದ ವಿಷವನ್ನು ಕಳೆದುಕೊಂಡು, ಸರ್ಪರಾಜನಿಂದ ರಸಪಾನವನ್ನು ಮಾಡಿ ಸಾವಿರ ಆನೆಗಳ ಬಲತಳೆದು ಮೇಲಕ್ಕೆ ಬಂದನೆಂದು ಕಥೆ.]

65-66. (ಎರಡು ಸಲ ಐದು) ಈರ್ಐದು. ವಿಗಡ-ಭಯಂಕರ. ಅಧಿ–ಲೋಕವು ಉಂಟಾಗುವ ಮೊದಲೇ ಇದ್ದ. ಕೈದುಕಾರಂ ಅದು ಅವರ್ ಐ–ಯಾರು ತಾನೆ ಆಯುಧ ಧರಿಸಿ ನಿಲ್ಲಬಲ್ಲವರು? [ಭೀಮನ ಪರಾಕ್ರಮದ ವರ್ಣನೆ] ಬಿಲು ವಿದ್ಯೆ— ಬಿಲ್ಲುಬಾಣಗಳನ್ನು ಪ್ರಯೋಗಿಸುವ ವಿದ್ಯೆ. ಮೂವರು (ಭಾರ್ಗವಃಶರಸಂಧಾನೇ ರಾಘವೋ ಹಸ್ತಲಾಘವೇ॥ ದೃಢಮುಷ್ಟ್ಯಾತುರಾಧೇಯಃ ತ್ರಿಷುಃ ಶೂರೋಧ ನಂಜಯಃ॥) ಬಾಣಗಳನ್ನು ಬಿಲ್ಲಿಗೆ ಹೂಡುವುದರಲ್ಲಿ ಪರಶುರಾಮನೂ, ವೇಗವಾಗಿ ಎಸೆವ ಕೈಚಳಕದಲ್ಲಿ ರಾಮನೂ, ದೃಢಮುಷ್ಟಿಯಲ್ಲಿ ಕರ್ಣನೂ, ಹೀಗೆ ಒಬ್ಬೊಬ್ಬರು ಒಂದೊಂದು ಗುಣದಲ್ಲಿ ಸಮರ್ಥರಾದರೂ, ಮೂರು ಗುಣಗಳಲ್ಲಿ ಅರ್ಜುನನೇ ಮಿಗಿಲಾದ ಸಮರ್ಥನು. ಮೊಳೆಯಲೇ–ಮೊಳಕೆಯಲ್ಲೆ. ಮುರುಟಿಸು-ಮುರಿದುಬಿಡು. ಬಲಿತ–ಬೆಳೆದ. ಪವಣೇ?–ಸಾಧ್ಯವೇ? [ದೃಷ್ಟಾಂತಾಲಂಕಾರ] ಹೆಚ್ಚಿಸು-ವೃದ್ಧಿಗೊಳಿಸು. ಕೈಮನದ+ಅಳಕಂ–ಕೈಯ ಮತ್ತು ಮನಸ್ಸಿನ ಶಕ್ತಿಯನ್ನು. ಭಾರ–ಕಷ್ಟ. ಪಿಪೀಲಿಕೆ (ಗೆದ್ದಲು) ಇರುವೆ. ಮನೆ–ಹುತ್ತ. ಕಾಳ+ಉರಗ–ಕೃಷ್ಣಸರ್ಪ. ವೈರ–ದ್ವೇಷ. ಸಪ್ತಾಂಗ [ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ] ಏಳು ರಾಜ್ಯಾಂಗಗಳು. ಕೈ...ಕೊಳ್ಳೆಹೊಡೆವರು. ಕಾಲದಲ್ಲಿ–ತಕ್ಕ ಸಮಯದಲ್ಲಿ. [ಉಪಮೆ].

66-67. ಇರುಬು–ಇಕ್ಕಟ್ಟು; ಗುಳಿ. ತಳಪಟ–ವಿಸ್ತಾರಸ್ಥಳ. ಕರುಬರು–ಹೊಟ್ಟೆಕಿಚ್ಚು ಪಡುವ ಹಗೆಗಳು. ಹರುವ–ವಿನಾಶಕ್ಕೆ ಉಪಾಯವನ್ನು. ಹೊರಬಿದ್ದರು+ಆದೊಡೆ–ಈ ಸ್ಥಿತಿಯು ತಪ್ಪಿದರೆ (ಬೆಳೆದು ಅನ್ಯರಿಂದ ಸಹಾಯ ಲಭಿಸಿ ಕೊಂಡರಾದರೆ). ತಿಮಿರವು (ಕತ್ತಲೆ)+ಅಡಗಿದ [ಕಳೆದು ಬೆಳಕಾದ] ಶಿಕ್ಷಾ+ಆಕ್ರಮಣ+ಅಡಗಿದ–ಶಿಕ್ಷಣದ ಬಲಾತ್ಕಾರವು ಇಲ್ಲದ. ದಂತಿ (ದಾಡೆಯುಳ್ಳ) ಆನೆ. ಕರ್ಮಗಳ ಭ್ರಮೆ (ಹುಚ್ಚು). ರುಜೆ (ರೋಗ) ಹಿಮ (ಕಾಲ ಕಳೆದ) ಸರಃ (ಸರೋವರದಲ್ಲಿ ಹುಟ್ಟಿದ)+ಜ–ಕಮಲ. ಅಮರಪದವು–ಸ್ವರ್ಗಸುಖವು, (ಉಪಮಾಲಂಕಾರ). ಯೋಗಿಯು ಯೋಗ ಬಲದಿಂದಲೆ ಸ್ವರ್ಗಪಡೆವನಲ್ಲದೆ, ವೃಥಾಕರ್ಮಗಳಿಂದಲ್ಲ: ಹಿಮವು ಕಮಲವನ್ನು ಕುಗ್ಗಿಸುತ್ತಿದೆ. ಅಣು–ಸ್ವಲ್ಪ. ಉಪಭೋಗಿಸು–ತಿನ್ನು. ಗರಗಸ (ತ್ಸಃ) ಕೃಕಚ. ಬಡ–ತೆಳು. ನುಸಿ–ಅಲ್ಪನು, (ದೃಷ್ಟಾಂತಾಲಂಕಾರ). ಕಾಲ–ಹಗಲು ಹೊತ್ತು ಗೂಗೆ (ಘೂಕ). ನಿರ್–ಇಲ್ಲ, ಜರಾ–ಮುದಿತನ. ಊಳಿಗ-ಕೆಲಸ. ತಮ+ಆಳಿ–ಕತ್ತಲೆಯ ಸಮೂಹ. ಕಾಳ (ಕಪ್ಪಾದ)+ಭುಜ (ಡೊಂಕು

ಡೊಂಕಾಗಿ)+ಗ (ಚಲಿಸುವ)–ಕೃಷ್ಣಸರ್ಪನು, (ಉಪಮಾ). ಸಂಸ್ಕೃತದಲ್ಲಿ ಕಾಲ–ಕಾಳ; ಎರಡೂ ಒಂದೇ.

67. ದಾತಾರ–ಧನಿ. ದುರ್ಮೇಳನು+ಅಹ–ದುಷ್ಟರ ಸಹವಾಸವುಳ್ಳ. ಅನುಕೂಲೆ–ವಿಧೇಯಳು×ಪ್ರತಿಕೂಲೆ. ಅಂತರ್ದಾಯಿ+ಅಹ–ಗುಟ್ಟನ್ನು ಅನ್ಯರಿಗೆ ಹೇಳುವವ. (ಅಂತರ್ದಾಹಿ ಎಂದು ತಿದ್ದಬಹುದು). ವ್ಯಾಳ–ಸರ್ಪವು ವಾಸಮಾಡಿದ ಮನೆಯನ್ನು) ಲವಕಾಲ–ಕೂಡಲೆ, ಊಳಿಗವು+ಹಿರಿದು+ಅಹುದು–ಹೆಚ್ಚಿನ ದುಃಖಕ್ಕೆ ಕಾರಣವಾಗುವುದು. ಮಸಗೆ ಮೂಡಿದ ಹೊಲ–ಒತ್ತೊತ್ತಾಗಿ ಹುಟ್ಟಿದ ಗಡ್ಡೆ. ದುಷ್ಟ+ಪ್ರಸರದ (ಸಮೂಹದ)+ಏಳಿಗೆ–ವೃದ್ಧಿ. ಹುಸಿ–ಸುಳ್ಳು (ಬಾಳುವೆ) ಹುದುವಿನ+ಆರಂಬದ ಫಲ+ಉದಯ (ಒತ್ತಾಗಿ ನಟ್ಟ ವ್ಯವಸಾಯದ ಫಲ.) ನಸಿದು ಹೋಗು–ಕುಗ್ಗು. ಹಸನು–ಸಂತೋಷ (ತ್ಸ:) ಪ್ರಸನ್ನ. ಎರೆಗೆ–ಆಹಾರವಾದ ಹುಳು. ಅ (ಇಲ್ಲದ್ದು)+ನಿಮಿಷ (ರೆಪ್ಪೆ) ಬಿಡು–ತೆರೆ. ರಾಗ+ಅಮೃತಕೆ–ಇಂಪಾದ ರಾಗಕ್ಕೆ. ಹನನ–ಕೊಲೆ. ಇರುಬು–ಗುಳಿ. ರಿಪು (ಶತ್ರು)+ಜನ (ಅರಸು) ಪರ+ಅಭ್ಯುದಯ (ಏಳಿಗೆ). ಶತ್ರುಗಳನ್ನು ಮೋಹಕ್ಕೊಳಪಡಿಸಿ ವಂಚಿಸಿ ಕೊಲ್ಲಬೇಕೆಂದು ಶಕುನಿಯ ಅಭಿಪ್ರಾಯ. (ಉಪಮೆ). ಸುನೀತಿಯಂ (ಯಥಾರ್ಥನೀತಿಯನ್ನು)+ಅಂದಗೆಡಿಸಿ (ತಪ್ಪಿಸಿ). ತದೀಯ (ಆತನ.) ವಂಶಚ್ಛೇಧ–ವಂಶವನ್ನು ವಿನಾಶಗೊಳಿಸುವ ಉಪಾಯವನ್ನು [ದುರ್ಯೋಧನನು ಶಕುನಿಯ ಸೋದರರನ್ನು ಅನ್ಯಾಯವಾಗಿ ಕೊಂದ ನಿಮಿತ್ತ, ದುರ್ಯೋಧನನ ವಂಶಚ್ಛೇದ ಮಾಡಬೇಕೆಂದು ಪಾಂಡವರೊಡನೆ ಜಗಳಕ್ಕೆ ಗಂಟಿಕ್ಕುವಂತೆ ಕಳಿಂಗನು ಬೋಧಿಸಿದನೆಂದು ತುರಂಗ ಭಾರತದಲ್ಲಿ ಹೇಳಿದೆ]

68. **ಕರ್ಣ-ಕೃಷ್ಣ ಸಂವಾದ:**—[ಚಂದ್ರವಂಶದ ಅರಸಾದ ಯಯಾತಿಗೆ, ದೇವಯಾನೆ–ಶರ್ಮಿಷ್ಠೆಯರೆಂದಿಬ್ಬರು ರಾಣಿಗಳು. ದೇವಯಾನೆಯಲ್ಲಿ ಯದು ಮೊದಲಾದ ಇಬ್ಬರು ಮಕ್ಕಳು, ಮತ್ತೊಬ್ಬಳಲ್ಲಿ ಪುರು ಮೊದಲಾದ ಮೂವರೂ ಹುಟ್ಟಿದರು. ಯದುವಿನ ಸಂತತಿ ಯಾದವವಂಶ; ಪುರುವಿನಿಂದ ಕುರು, ಅವನಿಂದ ಕುರುವಂಶ. ಹೀಗೆ ಕೌರವರೂ ಯಾದವರೂ ಒಂದೇ ಬುಡಕಟ್ಟಿನವರೆಂದು ಕೃಷ್ಣನ ಮಾತು. ಆದರೆ ಕರ್ಣನೂ ಕುಂತೀ ಪುತ್ರನಾದುದರಿಂದ ಕುರುವಂಶದೊಳಗೇ ಸೇರಿದವನಾಗಿರುವನೆಂದು ಮಾತ್ರ ಇದು ವರೆಗೆ ಆವನು ತಿಳಿದಿರಲಿಲ್ಲ] ಕರ್ಣನು ಕೃಷ್ಣನಿಗೆ ಮೈದುನನು (ಹೇಗೆ?) ಬರಸೆಳೆದು–ಹತ್ತಿರಕ್ಕೆಳೆದು. ನನಗೆ....–ನಾನು ನಿಮ್ಮೊಡನೆ ಸಮಾನನೆನಿಸಿ ನಡೆಯಲು ಯೋಗ್ಯನೆ? ತೊಡೆಸೋಂಕಿನಲಿ–ತೊಡೆಗೆ ತಗಲುವಷ್ಟು ಸಮೀಪಸಾರಿದವನಾಗಿ, ನಯವ (ನೀತಿಯನ್ನು) ಬಿತ್ತಿದನು (ಉಪದೇಶಿಸಿದನು). ಚಿತ್ತ....–ಇನ್ನೂ ನೀನು ಕುರುವಂಶದವನೆಂಬುದು ನಿನಗೆ ತಿಳಿದುಬಂದುದಿಲ್ಲ. ಹವಣೆ–ಹೋಲುವೆ. ಭಾನುವಂಶ (ಸೂರ್ಯವಂಶದಲ್ಲಿ) ಲಲಾಮನು–ಶ್ರೇಷ್ಠನು.

ಸೂರ್ಯವಂಶದ ರಾಮನಿಗೆ ಸರಿ(ಏಕೆ?–ಸೂರ್ಯ ಪುತ್ರನಲ್ಲವೆ?) ಅಂಜಲಿ–ಎರಡೂ ಕೈಗಳಲ್ಲಿ, ಗೌರವಾರ್ಥ. ಕೆಲಕೆ–ಬದಿಗೆ, ದಿವ (ಹಗಲನ್ನು)+ಕರ (ಮಾಡುವವನು) ಸೂರ್ಯನು.

69. ಕಲಿ–ಪರಾಕ್ರಮಿ; ದೇವ–ಪೂಜ್ಯನು. ಫಲುಗುಣ (ಫಲ್ಗುಣ)–ಹುಬ್ಬಾ ನಕ್ಷತ್ರದಲ್ಲಿ ಹುಟ್ಟಿದವನು. ಧರಣಿಯ–ಭೂಮಿಗಾಗಿ; ನಡೆವ ಯುದ್ಧವು. ಇದು ಇತ್ತಂಡಕ್ಕೂ ಕಾಮಿತ (ಉಚಿತ)ವಲ್ಲ. ಅಭ್ಯುದಯ–ಏಳಿಗೆ. ನಿನಗೆ–ಹಸ್ತಿನಾಪುರ ರಾಜ್ಯದ ಅರಸುತನವೆಂಬ ಗೌರವದ ಪದವನ್ನೀವೆನು. ಕಿಂಕರ–ಸೇವಕ. ಬಾಯ್ (ಬಾಯೊಳಗಣ)+ತಂಬುಲ (ವೀಳೆಯ)ಕ್ಕೆ ಕೈ+ಆನು (ಹಿಡಿ) ತಂಬುಲ (ತ್ಭ) ತಾಂಬುಲ. ವಿಲಾಸ–ಸೊಬಗು, ಸೌಭಾಗ್ಯ. ಹಸಾದ (ತ್ಭ) ಪ್ರಸಾದ.

70. ಸೂರಿಯ (ಸೂರ್ಯ) ಪಾಂಡವರಿಗೆ ಅಣ್ಣನೂ ಕೌರವರಿಗೂ ಆಧಾರ ನಾದ ಮಿತ್ರನೂ ನೀನೆ ಇರುವಾಗ, ನಿನ್ನ ಅರಸುತನಕ್ಕೆ ಇತ್ತಂಡದವರೂ ಒಪ್ಪುವ ರಾದುದರಿಂದ, ನೀನೊಬ್ಬನೆ ಈ ಯುದ್ಧವಾಗದಂತೆ ತಡೆಯಲು ಸಮರ್ಥನಾಗಿರುವೆ. ಸೆರೆ (ಶಿರಾ)....ಕುತ್ತಿಗೆಯಲ್ಲಿರುವ ರಕ್ತ ನಾಳಗಳು ಉಬ್ಬಿದುವು. ದೃಗ್ (ಕಣ್ಣು)+ ಜಲ (ನೀರು) ಕಣ್ಣೀರು, ಸುರಿಸಿ, ಹರಿಯ....–ಕೃಷ್ಣನಿಗೆ ದುರ್ಯೋಧನನ ಮೇಲಿದ್ದ ಹಗೆಗೆ ಇದೇ ಸೂಚನೆಯು; ಇನ್ನು ಅವನನ್ನು ಕೃಷ್ಣನು ಸುಟ್ಟುರುಹದೆ ಎಂದೂ ಬಿಡನು. ಹೊಗಲು–ಬಾಳುವಂತೆ, ಇಲ್ಲ. ಭೇದದಲಿ (ಭೇದೋಪಾಯದಿಂದ). ಹೊಕ್ಕು–ನನ್ನನ್ನು ಆಶ್ರಯಿಸಿ. ಇರಿದನೋ–ಕೊಂದನಲ್ಲವೆ? ಚಿಂತಾ+ಉದಧಿ (ಸಮುದ್ರ) ಅದ್ದುವೋಲ್–ಮುಣುಗಿದಂತೆ. ಗ್ಲಾನಿ–ಬೇಸರ. ಜನಗೈಸಿಕೊಂಬುದು– ಸೇವೆಗೆ ಇರಿಸಿಕೊಳ್ಳುವುದು. (ನಿನ್ನವರೆನಿಸುವುದು) ಅಪದೆಸೆ–ಅಪಕೀರ್ತಿ, ಹಾನಿ.

70-71. ಮಾ (ಲಕ್ಷ್ಮಿಯ)+ಧವ(ಪತಿ) ಕೃಷ್ಣ. ಸೋಲುವನಲ್ಲ–ಮರುಳಾಗು ವವನಲ್ಲ. ಬೆಸಗೈ–ಸೇವೆಮಾಡು. ಹೊರೆದ–ಕಾಪಾಡಿದ. ಭರದಲಿ–ನಿಶ್ಚಯವಾಗಿ. ಕಥನ–ನಿರೂಪಿಸಿದ ಸಂಗತಿ. ಎಡೆ ಕುಡದೆ–ತಪ್ಪದೆ. ಬಲಿಯಂ (ಬಲಿಯಾಗಿ) ಇಕ್ಕುವ (ಅರ್ಪಿಸುವ) ಎನ್ನ ಒಡೆಯ(ನಾದ ದುರ್ಯೋಧನನು ಏನಾಗುವನೊ ಆದರ)ಂತೆ ನಾನೂ ಆಗುವೆನು. ಹರಹಿಕೊಳು–ಪ್ರಸಿದ್ಧಿಪಡಿಸು. ನಿಲಿಸು (ಯುದ್ಧಕ್ಕೆ ಅಥವಾ) ಪ್ರತಿಷ್ಠಿಸು. ಕೈವಾರ–ಹೊಗಳಿಕೆ. ಸಮರದ ಸಾರದಲಿ–ಶ್ರೇಷ್ಠವಾದ ಯುದ್ಧದಲ್ಲಿ. ಓರಗೆಯ–ಸಮಾನವಾದ. ಸಂಪನ್ನತನ–ಪರಾಕ್ರಮ ಸಂಪನ್ನತೆ. ಚತುರ್+ಅಂಗ (ರಥ, ತುರಗ, ಆನೆ, ಕಾಲಾಳು.) ಋಣ (ಸಾಲ) ಉಪಕಾರ. ಹಿಂಗೆ–ತೀರುವಂತೆ. ಪತಿ (ಯಜಮಾನನ)+ಅವಸರಕ್ಕೆ–ಕೆಲಸಕ್ಕಾಗಿ. ನೂಕುವೆ–ಬಿಡುವೆನು. ರಾಜೀವ ಸಖ–ಸೂರ್ಯನು.

72. **ಕರ್ಣ-ಕುಂತೀ ಸಂವಾದ:**— ಅರ್ಘ್ಯ—ಪೂಜೆಗಾಗಿ ಅರ್ಪಿಸುವ ನೀರಿನ ಬೊಗಸೆ. ಸಾರ–ಶ್ರೇಷ್ಠ. ಉದಾರ (ಕೊಡುವುದರಲ್ಲಿ) ಸುರಭೂಜ (ದೇವ

ಲೋಕದ ಮರವಾದ ಕಲ್ಪವೃಕ್ಷ)ನನ್ನು ದಾನಶೂರತೆಯಲ್ಲಿ ಹೋಲುವವನಾದ ಕರ್ಣ. ನೆರೆ ಕೊರಳಿಗೆ ಔಕಿದುದು–ಕೊರಳು ಬಿಗಿಯಿತು. ಅಳಲಿನ–ಅಬುಧಿ–ದುಃಖಸಾಗರ. ಬೆಸಸು–ಹೇಳು. ಹಸಾದ+ಎಂದನು–ಹಾಗೇ ಆಗಲಿ ಎಂದನು. [ಕೃಷ್ಣನು ಕರ್ಣ ನೊಡನೆ ಸಂವಾದವೆಸಗಿ ಹಿಂತಿರುಗಿದ ಬಳಿಕ, ಒಂದು ದಿನ ರಾತ್ರಿಯಲ್ಲಿ ಸೂರ್ಯನು ಕರ್ಣನಿಗೆ ಕಾಣಿಸಿಕೊಂಡು 'ನಾಳೆ ನಿನಗೆ ತಾಯಿಯಾದ ಕುಂತಿಯು ನಿನ್ನ ಬಳಿ ಬಂದು ಎರಡು ವರಗಳನ್ನು ಕೇಳುವಳು. ಅವುಗಳನ್ನು ನೀನು ಕೊಟ್ಟಲ್ಲಿ ನಿನ್ನ ಬಾಳುವೆ ತೀರಿತು' ಎಂದು ಎಚ್ಚರಿಸಿದ್ದನು.] ಬಿಸಜಬಂಧು–ಸೂರ್ಯ (ಏಕೆ?) ಒಸೆದು–ವಿಶ್ವಾಸವಿಟ್ಟು.

73. ವಿಗಡತನ–ಕ್ರೂರಬುದ್ಧಿ (ತ್ಸ) ವಿಕಟ. ಓಲಗಿಸು–ಸೇವಿಸು. ತಾನು (ಈಗ) ಹೇಳುವುದು. ಹಿಸುಣ (ತ್ಸ) ಪಿಶುನ–ನೀಚ. ಬಗೆ–ಅಭಿಪ್ರಾಯ. ಬಿಗಿಸದೆ–ಬಿಮ್ಮಗೆ ಇಟ್ಟುಕೊಳ್ಳದೆ, ಇರು. ಸಲಿಸು–ನಡೆಸು. ಸಹಜ+ಆಯತದ–ಒಡಹುಟ್ಟಿದುದ. ನಚ್ಚಿ–ನಂಬಿ. ಹೊರೆದ–ಸಾಕಿದನು. ನಿಮ್ಮ+ಅಡಿ+ಬಂದ–ನೀವು ದಯೆಯಿಟ್ಟು ಇತ್ತಸಾರಿದ. ದುಃ (ಕೆಟ್ಟ ದುಷ್ಟ)+ಆಗ್ರಹ–ಹಟ. ಹೋದ–ಒಮ್ಮೆ ಶತ್ರುವಿನ ಕಡೆಗೆ ಎಸೆದ. ಕಾದಿ....ನಿನ್ನ ಹಗೆತನವನ್ನು ಯುದ್ಧಮಾಡುತ್ತಾ ಕಳೆಯಬೇಕಲ್ಲದೆ, ಸೋದರರನ್ನು ಕೊಲ್ಲುವುದಕ್ಕೆ ಮಾತ್ರ ಬಗೆಯದಿರು, ಎಂದು ತಾತ್ಪರ್ಯ.

73-74. **ಕರ್ಣಾವಸಾನಃ**–[ಕರ್ಣನು ಕುಲಹೀನನೆಂದು ಬ್ರಹ್ಮಾಸ್ತ್ರವನ್ನು ಅವನಿಗೆ ದ್ರೋಣನು ಉಪದೇಶಿಸಲಿಲ್ಲ. ಆಗ ಕರ್ಣನು ಪರಶುರಾಮನಿಂದ ಆ ಅಸ್ತ್ರವನ್ನು ಪಡೆಯಲು ಹೋದನು. ಅಲ್ಲಿ ಒಂದು ದಿನ ಸಮುದ್ರತೀರದಲ್ಲಿ ಕರ್ಣನು ಸಂಚರಿಸುತಿರಲು, ಒಬ್ಬ ಬ್ರಾಹ್ಮಣನ ಹಸುವನ್ನು ಕಂಡು ಅದು ಜಿಂಕೆಯೆಂದು ಭ್ರಾಂತಿಯಿಂದ ಕರ್ಣನು ಅದಕ್ಕೆ ಬಾಣ ಎಸೆದು, ಬಳಿಕ ಅಪರಾಧ ತಿಳಿದು ಕ್ಷಮೆ ಬೇಡಿದನು. ಬ್ರಾಹ್ಮಣನು ಆಗ ಕೋಪಿಸಿಕೊಂಡು,–'ಯಾವನೊಡನೆ ಕಾದುವುದಕ್ಕೆ ಈ ಸನ್ನಾಹ ನಡೆಯುತಿರುವುದೊ ಅವನೊಡನೆ ಕಾದುವಾಗ ನಿನ್ನ ರಥ ಚಕ್ರವು ನೆಲದಲ್ಲಿ ಹೂತು ಹೋಗಲಿ, ಆಗ ನಿನ್ನ ಶತ್ರುವು ನಿನ್ನನ್ನು ಕೊಲ್ಲಲಿ' ಎಂದು ಕರ್ಣನನ್ನು ಶಪಿಸಿದರು. ಅದರಂತೆ, ಕರ್ಣನು ಯುದ್ಧಮಾಡುವಾಗ ಅವನ ರಥದ ಚಕ್ರವು ಭೂಮಿಯಲ್ಲಿ ಹೂತುಕೊಂಡಿತು.] ಇದು, ದುರ್ಯೋಧನನ ವೈಭವವು ಕರ್ಣನ ಜಯಾಪಜಯಗಳನ್ನು ಅವಲಂಬಿಸಿ ಉಳಿವುದು ಅಥವಾ ಅಳಿವುದು ಎಂದಿದ್ದುದರಿಂದ, ದುರ್ಯೋಧನನ ಸಂಪತ್ತು ಮುಳುಗಿತೆಂಬ ಭಾವವನ್ನು ಸೂಚಿಸಿತು. ಕುಕ್ಕರಿಸೆ–ಕುಗ್ಗಲು. ಕೆರಳಿ–ಕೋಪಿಸಿ, ಕಂಬಿ–ಸಲಿಕೆ (ದೆಬ್ಬೆ) ವಾಘೆ (ಲಗಾಮು). ತಿರುಹಿ (ಎಡಬಲಕ್ಕೆ) ತಿರುಗಿ. ಚಪ್ಪರಿಸಿ–ಉತ್ಸಾಹ ಹುಟ್ಟುವಂತೆ ಮೈ ತಟ್ಟಿ. ಸತ್ವದಿ ಉರವಣಿಸಿ–ಬಹಳ ಬಲಹಾಕಿ+ಸಾಧ್ಯವಾಗದೆ. ತೇಜಿ–ಕುದುರೆ, ಜವ+ಕುಂದಿದುವು–ಬಲ ತಗ್ಗಿದುವು.

(ಮುಂದಿನ ತನ್ನ ಕೆಲಸಕ್ಕೆ ಅನುಕೂಲವಾಗುವಂತೆ) ಉಟ್ಟ ಬಟ್ಟೆಯ ಸೆರಗನ್ನು ಮೇಲೆ ಸಿಕ್ಕಿಸಿಕೊಂಡನು. ಅರ್ಧ+ಘಟಿಕಾ. ಅಳವಿಗೊಡು–ಯುದ್ಧಮಾಡು. ಧನಂ (ರಾಜಸೂಯ ಕಾಲದಲ್ಲಿ ಹೇರಳ ದ್ರವ್ಯವನ್ನು)+ಜಯ–ಗೆದ್ದವನು, ಅರ್ಜುನ. ರೂಢಿಸಿದ–ಪ್ರಸಿದ್ಧ. ಸಂಧದ ಪಾಡು–ಪರಾಕ್ರಮಿಗಳ ವಿಚಾರ. ಖೋಡಿಗಳೆ–ತಿರಸ್ಕರಿಸು. ವೈದಿಕ (ವೇದದಲ್ಲಿ ಹೇಳಿದ) ಲೌಕಿಕ (ಲೋಕದಲ್ಲಿ ರೂಢಿಯಾಗಿರುವ) ಸ್ಥಿತಿ. ನಾಡೆ–ಪೂರ್ಣವಾಗಿ. ಬಲ್ಲಿರಿ–(ಪಾಂಡವರೆಲ್ಲರೂ) ತಿಳಿದೇ ಇರುವಿರಿ. ಕೀಲ+ಅಚ್ಚಿನಲಿ+ಮುಂ+ಕೈ ಕೊಟ್ಟು–ಗಾಲಿಯ ಅಚ್ಚಿಗೆ ಕೀಲು ಹೊಡೆದ ಕಡೆ ಮುಂಗೈಯಿಂದ ಹಿಡಿದು. ಮೊಳಕಾ....–ಮೊಳಕಾಲಿನ ಮೇಲೆ ಕೂತು. ಮುಗ್ಗಿದ–ಹೂತ. ಚಮ್ಮಟಿಕೆ (ಚರ್ಮಪಟ್ಟಿಕಾ. ತ್ಸ) ಚಾಟಿ. ಬೇಗ (ಬಾಣಗಳನ್ನು ಎಸೆಯಲು ತವಕ) ಮಾಡು.

74-75. ಗಾಂಡೀವ ಧನುರ್ಧಾರಿಯಾದ ಅರ್ಜುನನೆ! ದಿವ್ಯ (ದೇವತೆಗಳಿಗೆ ಸಂಬಂಧವುಳ್ಳ.) ಮಾರ್ಗಣ–ಬಾಣ. ವಿಷಮ (×ಸಮ) ಎಣೆಯಿಲ್ಲದ. ಆರೋಹಿಸು (×ಅವರೋಹಿಸು) ಏರು. ತ್ರಿಯಂಬಕ (ತ್ರ್ಯಂಬಕ) ಶಿವ, ಮುಕ್ಕಣ್ಣನು. ಕೈಕೊಂಬನೆ–ಲಕ್ಷ್ಯಮಾಡುವನೆ? ಅರ್ಜುನನಲ್ಲಿ ಆಗ ಸೋದರಪ್ರೇಮವು ಸ್ವಭಾವಿಕವಾಗಿ ಚುಚ್ಚತೊಡಗಲು, ಭವ-ಜನ್ಮ. ಒಡ+ಬಂದ+ಆತನೋ–ಸಂಗಡ ಹುಟ್ಟಿದವನೋ? ಮೇಣ್...–ಮತ್ತೆ ನನಗೆ ಸಂಶಯ. ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು ಸೂತಜಾತಿಯವನು; ಇವನು ಸಾರಥಿಯಾಗುವನು, ಪುರಾಣ ಹೇಳುವನು; ಇಂಥವನಲ್ಲಿ ಕರ್ಣನ ಯೋಗ್ಯತೆ ಹೇಗೆ ಬಂದೀತು? ವಿಮಲ....–ನಿರ್ದೋಷವಾದ ಚಂದ್ರವಂಶದಲ್ಲಿ ಸುಪುತ್ರನಾಗಿ ಹುಟ್ಟಿದವನೆಂದೆಣಿಸಬೇಡ. ತಲೆಯನ್ನು ಮಾರಿ (ಇತರರ ಸೇವೆಗೆ ಒಪ್ಪಿಸಿ) ಉಗಿದ ವೀಳೆಯನ್ನು ಕೈಯಲ್ಲಿ ಹಿಡಿವನೀತನು! (ಇಂಥ ನೀಚಕೆಲಸವನ್ನು ಮಾಡುವವನೆ!) ಆಗ ಕೃಷ್ಣನು ಪೂರ್ವ ವಿಷಯಗಳನ್ನು ಎಚ್ಚರಿಸಿ ಕೋಪಗೊಳಿಸುವನು. ಜೂಜು (ದ್ಯೂತ-ತ್ಸ) ನಾಡು ಕೊಳಿಸಿದ–ದುರ್ಯೋಧನನಿಗೆ ರಾಜ್ಯ ದೊರೆವಂತೆ ಸಾಧಿಸಿದ. ನಾಡ (ನಾಡಿಗಾಗಿ) ಸಂಧಾನದ ಕಾಲದಲ್ಲಿ ಕರ್ಣನೂ ಕೃಷ್ಣನನ್ನು ಸೆರೆಯಿಡುವ ವಿಚಾರದಲ್ಲಿ ಸೇರಿದ್ದವನು. ಅನು–ಸಿದ್ಧ. ಹಿತವಂ–ಬಂಧುವು, ಬೇಕಾದವನು. [ಸಂಧಾನಕ್ಕೆ ತೆರಳಿದ್ದ ಕೃಷ್ಣನೊಬ್ಬನನ್ನೆ ಕಟ್ಟಿಕ್ಕಿದರೆ, ಪಾಂಡವರು ನಿರಾವಲಂಬಿಗಳಾಗಿ ಅವರನ್ನು ಗೆಲ್ಲುವುದು ಸುಲಭವೆಂದು ದುರ್ಯೋಧನನು ಬಗೆದು, ಕರ್ಣನ ಪರಾಮರ್ಶೆಯಂತೆ ಕೃಷ್ಣನನ್ನು ಬಿಗಿಯಲೊಪ್ಪಿದನು.]

75-76. ಭೀಮನನ್ನು ಕರ್ಣನು ನಿರಾಯುಧನನ್ನಾಗಿ ಮಾಡಿದರೂ ಕೊಲ್ಲದೆ, ತನ್ನಬಿಲ್ಲಿನ ಕೊಪ್ಪು(ತುದಿ)ಅವನ ಕೊರಳಿಗಿಕ್ಕಿ ಎಳೆದು ಅವಮಾನ ಮಾಡಿದ್ದನು. ಅದೇ ರೀತಿ ಧರ್ಮರಾಯನನ್ನೂ ಒದ್ದು ಕೆಡವಿದ್ದನು. ನೀತಿಯ+ನೆನೆಯದೆ+ಇರು–ಯುದ್ಧದಲ್ಲಿ ನಿರಾಯುಧರು, ರಥಹೀನರು ಮೊದಲಾದವರನ್ನು ಕೊಲ್ಲಬಾರದೆಂಬ ಧರ್ಮ

ವನ್ನು ಪುರಿ. ನಿಜವ ತೋರಿದನು–ತನ್ನಲ್ಲಿ ವಿಶ್ವಾಸ ಹುಟ್ಟುವ ಹಾಗೆ ತಾನ್ಯಾರೆಂಬುದನ್ನು ಸ್ಪಷ್ಟೀಕರಿಸಿದನು. ಮಾಯೆ–ಇತರರನ್ನು ಭ್ರಮೆಗೊಳಿಸುವ ವಿದ್ಯೆ. ತಮ–ಅನೀತಿ–ನೀತಿಗಳನ್ನು ವಿಚಾರಮಾಡದಂಥ ಅಜ್ಞಾನವನ್ನು. ಡೊಳ್ಳಾಸದಲಿ–ವಿಸ್ತಾರವಾಗಿ. ಕಲಿ+ಮಾಡಿ–ಪೌರುಷವನ್ನು ಅವನಲ್ಲಿ ಹುಟ್ಟಿಸಿ. ವ್ಯಾಸಿ–(ಉತ್ತಮ)ವಿಚಾರವು. ಮುಂದು+ಕಾಣಿಕೆ–ಮೊದಲ ನೋಟ, ಪ್ರಾರಂಭ. ಮುನ್ನಿನ–ಹುಟ್ಟಿನ. ಜಾಣೆ (ಜ್ಞಾನ)ನಲಿ–ಬುದ್ಧಿವಂತಿಗೆಯಿಂದ. ಬಲಿದನು–ಬಲಪಡಿಸಿದನು; ಕೈಗೂಡಿಸಿದನು, ಮಲ+ಮಲ–ಮಮ್ಮಲ (ವೀಪ್ಸಾಸಮಾಸ). ಛಿಕ್ಕರಿ+ಕಳೆ–ತಿರಸ್ಕರಿಸು. ಬೆಚ್ಚ (ಧಾಬೆಸೆ) ಸೇರಿಸಿದ. ದುರ್ಯೋಧನನ ಬಂಧುಗಳು ಕರ್ಣನನ್ನು ಕುಲಹೀನನೆಂದೂ, ಕ್ಷತ್ರಿಯನಲ್ಲವೆಂದೂ ಎಂದಂದು, ದುರ್ಯೋಧನನು ಆ ತಿರಸ್ಕಾರ ನಿವಾರಣೆಗಾಗಿ ಅವನಿಗೆ ಅಂಗರಾಜ್ಯಾಧಿಪತ್ಯವನ್ನು ಕೊಟ್ಟನು. (ಕರ್ಣ ಚರಿತೆ).

76-77. ಉಚಿತ–ಬಹುಮಾನ. ಕೇಳ ಮೇಳ–ವಿನೋದದ ಆಟಗಳು. ನೋಡಲು ....–ವಿಚಾರಿಸಲಾಗಿ, ಹಿಂದೆ ಭೀಷ್ಮದ್ರೋಣರು ದುರ್ಯೋಧನನ ಕಾರ್ಯದಲ್ಲಿ ತಲೆಕೊಟ್ಟು ಪ್ರಯತ್ನಿಸಲಿಲ್ಲ. ಇಂತು+ಆ ಮಾಡಿತು+ಏನು+ಅರಸಂಗೆ–ಹೀಗೆ ನಾನಾದರೂ ದುರ್ಯೋಧನನಿಗೆ ಯಾವ ಉಪಕಾರ ಮಾಡಿದೆನು? ಜೋಳವಾಳಿ–ಹಂಗು. ಮಾರು–ಒಪ್ಪಿಸು. ಚೆಳಸು–ಅತಿಶಯ. ಹಳಚದೆ–ಯುದ್ಧಮಾಡದೆ. ಪಾಂಡವರು ಅರಣ್ಯವಾಸದಲ್ಲಿದ್ದಂದು, ಅರ್ಜುನನು ಇಂದ್ರಕೀಲಕ್ಕೆ ತೆರಳಿ, ಅಲ್ಲಿ ಶಿವನನ್ನು (ಪಶುಪತಿ) ಮೆಚ್ಚಿಸಿ, ಪಾಶುಪತ ಅಸ್ತ್ರವನ್ನು ಪಡೆದನು; ಆಗ ಪಾರ್ವತಿಯು ಅದರೊಡನೆ ತಾನೂ ಅಂಜನ ಬಾಣವನ್ನು ಕೊಟ್ಟಳು. ಪಶುಪತಿ–ಶಿವ. ಬಳುವಳಿ ಬಂದುದು–ನಂತರ ದೊರೆತುದು. ಡೊಹೆ–ಬತ್ತಳಿಕೆ. ಕಿಡಿಗಳ....–ಮುಂಭಾಗದಲ್ಲಿನ ಹರಿತದ ಭಾಗದಿಂದ ಕಿಡಿಗಳನ್ನುಗುಳುತಿದ್ದ. ವಾಸವ–ಇಂದ್ರ. ಒಡಲಲಿ (ತೃ. ಸಪ್ತಮಿ) ದೇಹದಿಂದ. ತೇಜಃ ಪುಂಜ–ಪ್ರಕಾಶದ ಗುಂಪು. ಹೊಳೆದು–ಕಾಣಿಸಿಕೊಂಡು. ಉಪ್ಪರಿಸಿ ನೆಗೆದು–ಬಲುದೂರಕ್ಕೆ ಹಾರಿ. ಹೋದುದು...–ಸೂರ್ಯಮಂಡಲದೊಳಕ್ಕೆ ಸೇರಿತು. ಭಟ+ಅಗ್ರಣಿ–ವೀರಶ್ರೇಷ್ಠ. ಸರಿ(ಯಾದ) ದೊರೆ. ಎರಡು ಯುಗ–ತ್ರೇತ ದ್ವಾಪರಗಳು. 'ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲ ಭೇದಿನಾ, ಪರಿವ್ರಾಡ್ಯೋಗ ಯುಕ್ತಶ್ಚ ರಣೇಚಾಭಿಮುಖೋ ಹತಃ' ಯೋಗದಿಂದ ಪ್ರಾಣಬಿಡುವ ಸನ್ಯಾಸಿ, ಯುದ್ಧದಲ್ಲಿ ಕಾದು ಮಡಿವ ವೀರನು ಇವರು ಸೂರ್ಯಮಂಡಲವನ್ನು ಭೇದಿಸಿ ಹೋಗತಕ್ಕವರೆಂದು ಮಹಾಭಾರತ ವಚನ. ಅರರೆ, ಭಾಪುರೆ....–ಮಹಾರಾಷ್ಟ್ರ ಭಾಷಾ ಶಬ್ದಗಳು. ಹೊಗಳಿಕೆ ತೋರಿಸುವುವು. (ಅನ್ವಯ.)

77. ಒಡೆಯ–ಸೇನಾಪತಿ. ಅನುಸಂಧಾನ—ಸಂಬಂಧ. ಅರೆ+ಅಟ್ಟು–ಹಿಮ್ಮೆಟ್ಟಿಸು. ಬಿಳಿದು+ಕೊಡೆ–ಬೆಳು ಗೊಡೆ. ಓರ್ಗುಡಿಸಿ–ಮಗುಚಿ. ಬಿಗು ಹೆಕ್ಕಳದ

ಹುಬ್ಬಿನ-ಗಂಟುಕಟ್ಟಿದ ಹುಬ್ಬುಗಳುಳ್ಳ (ಭ್ರೂ-ಕ್ಷ). ಬಿಟ್ಟ ಕಣ್ಣು-ತೆರೆದ ಕಣ್ಣು. (ಉಪಮಾಲಂಕಾರ). ಕರ್ಣನ ತಲೆ ಕೆಳಕ್ಕುರುಳಿದಾಗಲೆ ದುರ್ಯೋಧನನ ಸಾರ್ವಭೌಮತ್ವವೂ, ಐಶ್ವರ್ಯವೂ ಕೈತಪ್ಪಿ ಮಣ್ಣುಪಾಲಾಯಿತು. ಕಲ್ಪದ್ರುಮ (ವೃಕ್ಷ) ಸುರಧೇನು (ಕಾಮಧೇನು) ಕೆಡೆಕುತ್ತಿದರು-ಬೀಳುವಂತೆ ಹೊಡೆದರು. ಕಬ್ಬಿಣಕ್ಕೆ ಸ್ಪರ್ಶಿಸುತ್ತಲೇ ಚಿನ್ನವನ್ನಾಗಿ ಮಾಡುವ ಪರುಷ ಕಲ್ಲು. ಕೈವರ್ತಿಸು-ಕೈ ಬದಲಾಯಿಸು. ವಂದಿ-ಹೊಗಳುವವ. ತಟ್ಟು-ಸೇನೆ. [ಲಲಿತಾಲಂಕಾರ] ದ್ಯು (ಆಕಾಶ)+ಮಣಿ (ರತ್ನ)-ಸೂರ್ಯನು ಕರ್ಣನೆಂಬ ಸೂರ್ಯನೊಡನೆ. ಕವಲ (ದೊಡನೆ) ಬಾಡಿತು. ಶೋಕ-ದುಃಖವೆಂಬ ಕತ್ತಲಿನೊಡನೆ. ತಿಮಿರ-ಕತ್ತಲು. ಚಕ್ರ+ಅಂಗ-ಚಕ್ರವಾಕವೆಂಬ ಹಂಸ ಜಾತಿಯ ಹಕ್ಕಿ. ಭೂಪ+ಉತ್ತಮನ+ವಿಜಯ(ವೆಂಬ)+ಅಂಗನೆಗೆ (ಸ್ತ್ರೀಗೆ.) [ಒಂದರ ಸಂಗಡಲೆ ಮತ್ತೊಂದು ಕಾರ್ಯವೂ ನಡೆಯಿತೆಂದು ಮನೋಹರವಾಗಿ ಬಣ್ಣಿಸುವ ಸಹೋಕ್ತಿ ಅಲಂಕಾರ.]

78. **ದುರ್ಯೋಧನ ಕೋಪೋದ್ದೀಪನ:**—ಸಲಿಲ (ನೀರು)+ವ್ಯಾಳ (ಹಾವು.) ಆಳುವರೆ-ಮುಳುಗಬಹುದೆ? ಕಾರ್ಯಸ್ತು-ಕೆಟ್ಟು ಅಪಕೀರ್ತಿಯುಂಟಾಯಿತು. ಜಾಲ-ಸಮೂಹ. ಜ್ಞಾತಿ-ದಾಯಾದಿ. ಏಡಿಸು-ಕುಚೇಷ್ಟೆಮಾಡು. (ತಿರಸ್ಕರಿಸು). ಸೂಚಿ+ಅಗ್ರದಲಿ+ಸಮ್ಮಿಳಿತ-ಸೂಜಿಯ ಮೊನೆಯೂರತಕ್ಕ. ದರ್ಪ-ಹೆಮ್ಮೆ. ಮೇಲುದಾಯದ-ಮುಂದೆ ಬರಬಹುದಾದ. ತಾಗು ತಟ್ಟು-ಶುಭಾಶುಭಗಳು. ಕ್ಷೋಣಿ-ಭೂಮಿ. ತಡೆಗೆದರಿ-ಒಟ್ಟಾಗಿ ಸೇರಿ. ಒಟ್ಟಯಿಸಿ-ಮಾಡಿ. ಪಲಾಯನ (ದಲ್ಲಿ) ಪಂಡಿತ (ವಿದ್ವಾಂಸನು) ಉತ್ತರನೆಂಬ ವಿರಾಟ ರಾಜನ ಕುಮಾರನು. ಪಲಾಯನ....ಸೂರೆಯಲಿ-ಓಟವೆಂಬ ಸಂಪತ್ತನ್ನು ಕೊಳ್ಳೆ ಹೊಡೆವುದರಲ್ಲಿ,-ಓಡುವುದರಲ್ಲಿ. ಆತನ ಗಂಡ--ಅವನಿಗೂ ಮಿಗಿಲಾದವ. ಭಂಡ-ಲಜ್ಜೆಯಿಲ್ಲದವ. ರಾಯ-ಧರ್ಮರಾಯ. ಉತ್ತರನು ವಿರಾಟನ ಮಗನು. ಅಲ್ಲಿ ಪಾಂಡವರು ಅಜ್ಞಾತವಾಸದಲ್ಲಿದ್ದಾಗ, ದುರ್ಯೋಧನನು ಅವರನ್ನು ಕಂಡುಹಿಡಿವುದಕ್ಕಾಗಿ, ವಿರಾಟನ ದನಗಳನ್ನು ಸೆರೆಹಿಡಿದನು. ಈ ಸಮಾಚಾರವನ್ನು ಗೋಪಾಲಕರು ಹೆಂಗಸರಿದ್ದಲ್ಲಿ ತಿಳುಹಲಾಗ ಅಲ್ಲಿ ಒಡ್ಡೋಲಗದಲ್ಲಿದ್ದ ಉತ್ತರನು, ಬೃಹನ್ನಳೆ ಎಂಬ ಹೆಸರಿಂದ ಮರೆಯಲ್ಲಿದ್ದ ಅರ್ಜುನನನ್ನು ಸಾರಥಿಯಾಗಿ ಮಾಡಿಕೊಂಡು ಯುದ್ಧಕ್ಕೆ ನಡೆದು, ಕೌರವ ಸೇನೆಯನ್ನು ಕಂಡೊಡನೆ ಬೆದರಿ ರಥದಿಂದ ಹಾರಿ ಪಲಾಯನ ಮಾಡಿದನು. ಕೊನೆಗೆ ಅರ್ಜುನನೇ ಯುದ್ಧಮಾಡಿ ಗೆದ್ದುಕೊಂಡನು. [ಮಹಾಭಾರತ ಕಥೆ]. ಕುಂಡ (ತ್ಭ-ಕೊಂಡ).

79. ಅಡವಿ (ತ್ಭ-ಅಟವಿ). ನೆಲೆ-ಸ್ಥಿರ. ಜಡಿದೆ-ಬೀಸಿದೆ. ಕಳ-ರಣ ಭೂಮಿ ಕೊಳದ+ನಡು (ಅನ್ವಯಿಯಾ ಭಾವ). ಜೀವಸಖ-ಪ್ರಾಣದ ಗೆಳೆಯ. ಸೈಂಧವ-ಸಿಂಧೂ

ದೇಶದ ಜಯದ್ರಥ ರಾಜನು. ಜೀವನ-1. ಬಾಳು, 2. ನೀರು. ಗರುವಿಕೆ-ಗೌರವ. ಕೈದು(ಆಯುಧ)+ಕೊಳ್-ಹಿಡಿದುಕೋ. ಹಾಯ್ಕು-ಬಿಸುಡು. ಕೂಡಿ....-ನಿನ್ನ ಈ ದೇಹವು ಪ್ರಳಯಕಾಲದ ತನಕವೂ ಹೀಗೆಯೆ ಉಳಿವುದೇನು? ಕಲ್ಪ-ಪ್ರಳಯ. ಸಂಧಿಸೆ-ಹುಡುಕಿ. ಬೇಟೆಯಾಡು-ಕೊಲ್ಲು. ನಾಲ್ಕು ಯುಗಗಳು ಒಂದು ಸಾವಿರ ಬಾರಿ ಮಗುಚಲಾಗಲೇ ಪ್ರಳಯ. ಹಳಿವ(ಕೊಳವನು ಹೊಕ್ಕನೆಂಬ)-ನಿಂದೆಯನ್ನು. ಅಳಿದ(ಕೊಂದ)+ಅಕೀರ್ತಿ(ಅಪಕೀರ್ತಿ). ಭೂವಳಯಮಾನ್ಯನು-ಭೂಮಂಡಲದಲ್ಲಿ ಹೆಚ್ಚಾಗಿ ಮಾನಹೊಂದತಕ್ಕವನು. ದೈನ್ಯ ವೃತ್ತಿ-ನೀಚ ಕೆಲಸ.

80. ಹಾವಿನಲಿ ಬಂಧಿಸಿದೆ-ನಾಗ ಪಾಶದಿಂದ ಬಿಗಿದೆ. ವಾರಣಾವತದಲ್ಲಿ ಪಾಂಡವರನ್ನು ಕುಂತಿಯೊಡನೆ ಕಳುಹಿಕೊಟ್ಟು ಅಲ್ಲಿನ ಅರಗಿನ ಮನೆಯಲ್ಲಿ ಬೆಂಕಿಯಿಂದ ಸುಟ್ಟುಕೊಲ್ಲಬೇಕೆಂದು, ಆ ವಸತಿಯಲ್ಲಿ ಅಗ್ನಿದೇವನ ಪಸರಿಸಿದೆ. ಛಲ-ಪರಾಕ್ರಮ. ಹಳುವದಲಿ ಹೊದಿಸಿದ-ಕಾಡಿಗೆ ಕಳುಹಿಸಿದ. ಬಲ ಶಿರೋಮಣಿ-ಬಹು ಬಲಶಾಲಿ (ನಿಂದೆ!) ತಲೆ ಕೂದಲಲಿ ಕೈದುವ ಕಟ್ಟಿ-(ವಿನೋದ!) ರೋಷದ ತಾಮಸ-ಕೋಪದ ಗಾಢತೆ. ಪಾಂಡವ(ರೆಂಬ)+ತಿಮಿರ (ಕತ್ತಲೆಯನ್ನು ಹೋಗಲಾಡಿಸುವ)+ರವಿ (ಸೂರ್ಯ)-ಪಾಂಡವರನ್ನು ಸಂಪೂರ್ಣ ನಾಶಮಾಡುವವನು. ಭೀಮ(ನೆಂಬ)+ವನ(ಕಾಡಿಗೆ)+ದಾವ+ಅಗ್ನಿ-ಕಾಡುಗಿಚ್ಚಾದವನು. ಭೀಮ(ನೆಂಬ)+ಭಾಸ್ಕರ(ಸೂರ್ಯ)ನಿಗೆ+ರಾಹು (ಎನಂತಿರುವವನು)-ಭೀಮನನ್ನು ನುಂಗುವವನು. [ರೂಪಕಾಲಂಕಾರ]. ನೂರ(ಮಂದಿಯನ್ನು). ಕಾಲ-ಪ್ರಳಯದ ಕಾಲ.

80-81. ಕಡಿ-ಕಚ್ಚು. ತರು(ಮರು) ಗಿರಿ(ಬೆಟ್ಟ) ಶಿಖರ(ತುದಿ) ಕಾಲ್+ಕೊಳಿಸು-ಕಾಲನ್ನು ಸೇರಿಸು, ಹತ್ತು. ವಲ್ಮೀಕ ಸಂಗತನು-ಹುತ್ತವನ್ನೇರಿದವನು. ಶ್ರುತಿ-ವೇದ. ಯಮಳರು-ನಕುಲಸಹದೇವರು. ,ತರಳರು-ಚಿಕ್ಕವರು. ಫಲುಗುಣನಲ್ಲಿ ಮುನಿಸು-ಸಿಟ್ಟು ಇಲ್ಲ. ಸಗರ್ವ-ಗರ್ವದಿಂದ ಕೂಡಿದ. ಮರುಳ-ಪಿಶಾಚಿಗಳ. ಹಿರಿಯರಸು-ಧರ್ಮರಾಯ. [ಸಂಜಯನು ಹೇಳುವನು] ಉಬ್ಬರಿಸು-ಉಬ್ಬು. ಅಧಿಕ ಕ್ರೋಧಶಿಖಿ-ಹೆಚ್ಚಾದ ಸಿಟ್ಟೆಂಬ ಬೆಂಕಿ. ಕರಣ+ಇಂದ್ರಿಯ,-ದೇಹದಲ್ಲಿ; ಕಣ್ಣೇ ಮೊದಲಾದ ಜ್ಞಾನೇಂದ್ರಿಯಗಳಲ್ಲೂ ಹಸ್ತಪಾದ ಮೊದಲಾದ ಕರ್ಮೇಂದ್ರಿಯಗಳಲ್ಲೂ. ಗಬ್ಬರಿಸಿತು-ವ್ಯಾಪಿಸಿತು. ತುರುಬಿದೆ-ತುಂಬಿದ. ಅಂತಃಖೇದ-ಮನಸ್ಸಿನಲ್ಲಾದ ದುಃಖ. ಮಂತ್ರ+ಅಕ್ಷರಕೆ-ಉಚ್ಚರಿಸುವ ಮಂತ್ರಕ್ಕೆ. ಜವನಿಕೆ-ಪರದೆ (ತ್ಸ-ಯವನಿಕಾ.)ಉಚ್ಚರಿಸುವ ಮಂತ್ರವನ್ನು ಮರೆಮಾಡಿತು. ನಿರ್ಭರದ-ಹೆಚ್ಚಿನ. ಆವೇಶ-ಮೈ ತುಂಬುವುದು. ಸಲ್ಲಟಿಸಿದನು-ಬದಲಾದನು. [ತನ್ನ ಸಮಸ್ತವನ್ನು ಕಳೆದುಕೊಂಡು ಏಕಾಂಗನಾಗಿ ಇರುವುದರಿಂದ ದುರ್ಯೋಧನನು ಹೆದರಿ ಕೃಷ್ಣದ್ವೈಪಾಯನ ಸರಸ್ಸಿನಲ್ಲಿ ಜಲಸ್ತಂಭ ಮಂತ್ರ ಜಪ

ಮಾಡುತ್ತ ಅಡಗಿದ್ದನು; ಭೀಮನ ಸ್ವರವನ್ನು ಕೇಳಿದೊಡನೆ ಅವನಿಗೆ ಮಂತ್ರವು ಮರೆತು ಅವನು ಮೇಲಕ್ಕೆ ತೇಲಿ ಬಂದನು.] ಬಡಬಾನಲವು ಸಮುದ್ರದ ಮಧ್ಯದಲ್ಲಿರುವ ಬೆಂಕಿ. ತತ್ಕ್ರೋಧ-ಅವನ ಕೋಪಾಗ್ನಿಯು ಕಣ್ಣುಗಳಿಂದ ಕಿಡಿ ಹಾರಿಸುತಿದ್ದಿತು. ಉತ್+ಚಂಡ ಚಲದ-ಅತಿ ಕಠಿಣವಾದ ಹಟದ. [ಮಹಾಭಾರತ ಕಥೆ ಓದಿರಿ.]

## ತೊರವೆರಾಮಾಯಣದೊಳಗಿನ ಪದ್ಯಗಳು.

81-82. **ಶ್ರೀ ರಾಮ ವನಗಮನ:**—ವಸತಿ-ಮನೆ. ಪರಿ-ರೀತಿ. ನೃಪ (ಅರಸರ) ಲಾಂಛನ-ಗುರುತು; ಕಿರೀಟ, ಕೊಡೆ, ಚಾಮರ ಇತ್ಯಾದಿ. ಒಸಗೆ-ಶುಭವಾರ್ತೆ. ವರವಂ-ವರದಲ್ಲಿ. ಅವಲಂಬಿಸಿತು-ವಿಸ್ತರಿಸಿತು. ಮುನಿ-ವಸಿಷ್ಟ. ವಿಧಿವಿಹಿತ-ಶಾಸ್ತ್ರೋಕ್ತವಾದ. ಅರವಿಂದ (ಕಮಲ) ಮುಖಿ-ಸೀತೆ. ಪರಿಭ್ರಮಣ-ಸುತ್ತಾಟ. ಕಣ್+ತೆರೆದನು+(ಅಷ್ಟರಲ್ಲಿ) ಅನಿತರಲಿ,-ಎಚ್ಚರಗೊಂಡೆನು. [ಬೆಳಗ್ಗೆ ಕಂಡ ಕನಸು ಮಧ್ಯಾಹ್ನದೊಳಗೆ ಫಲಗೊಡುವುದು.] ನಿವೇನ್....-ರಾಜ್ಯವೆಂಬ ಸಂಪತ್ತು ನನ್ನ ಕೈಸೇರುವ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು? ಅಯಸ (ತ್ಸ-ಆಯಾಸ). ಪುರಂದರನ....-ಇಂದ್ರನ ಸಂಪತ್ತಿಗೆ ಸಮಾನವಾದ ಸಂಪತ್ತು ಕೈಸೇರುವುದು. ಬಳಸು-ಸುತ್ತುಗಟ್ಟು. ಹೆಕ್ಕಳಿಸು-ಉತ್ಸಾಹ ತೋರು. ಕೈವಾರಿ-ಹೊಗಳುವವ. ಉಗಡಿಸು (ತ್ಸ-ಉತ್ಕಟ)-ಹೊಗಳು. ನಿಳಯ....-ಪ್ರತಿ ಮನೆಯಲ್ಲಿರುವ ಸುಂದರಿಯರ ಹೊಳೆವ ರತ್ನಗಳೇ ದೀಪವಾಗುಳ್ಳ ಆರತಿಯನ್ನು ಬೆಳಗುತಿರಲು, ರಾಮನು ರಾಜಬೀದಿಯಲ್ಲಿ ಮೆರೆವಣಿಗೆಯಿಂದ ಬಂದನು.

83. ಆದರೆ, ಕೈಕೆಯಿಂದಾದ ವಿಘ್ನವನ್ನು ಬಲ್ಲ; ಚಮೂ (ಸೈನ್ಯ)+ಪ-(ಒಡೆಯ) ಸೇನಾಪತಿ. ಸಚಿವ-ಮಂತ್ರಿ. ನಿಯೋಗಿ-ರಾಯಭಾರಿ. ಕವಡಿದ+ಅಂತಃಕರಣ-ಕಲಕಿದ ಮನಸ್ಸು. ಗಳಗದಗದಿತ ಕಂಠದ-ಕೊರಳಲ್ಲಿ ದುಃಖದಿಂದ ನಡುಗುವ ಸ್ವರದ. ಸುಮಂತ್ರನು ದಶರಥನ ಮಂತ್ರಿ. ಮುರವಿನ ಮುದದ-ಸಂತೋಷವು ಮುರಿದ. ಹೊಳೆವ ಅಶ್ರು-ಸುರಿದ ಕಣ್ಣೀರು. ವದನ ಚೇಷ್ಟೆ-ಮುಖವಿಕಾರ. ಒಯ್ಯನೆ-ಮೆಲ್ಲನೆ. ರಾಜಾಧೀಶ-ಚಕ್ರವರ್ತಿ. ಮಧುರವಚಃ+ವಿಳಾಸದಲಿ-ಸವಿಮಾತುಗಳಿಂದ. ನಿರ್ಬಂಧದ ನಿರೋಧ....-ಸಂತೋಷವನ್ನು ತಡೆವ ಬಲವಾದ ದುಃಖವು. ಈಸು....-ಇಷ್ಟು ಕಠಿಣವಾದ ದುಃಖವು ಯಾರಿಂದ ಯಾವ ಕಾರಣದಿಂದ ಉಂಟಾಯಿತು? ರಘುರಾಯನ....-ರಘುಕುಲ ತಿಲಕನಾದ ರಾಮನ ಪಟ್ಟಾಭಿಷೇಕವೆಂಬ ರಾಜಲಕ್ಷ್ಮಿಯ ವಿವಾಹದ ವಿಷಯವಾಗಿ ನಿಮ್ಮ ಮನಸ್ಸಿನಲ್ಲಿ ಹುಟ್ಟಿರುವ ಅಭಿಪ್ರಾಯವೇನು? [ಹೇಳಬೇಕಾದುದನ್ನು ಮನೋರಂಜಕವಾದ ಬೇರೊಂದು ರೀತಿಯಾಗಿ ಹೇಳಿದೆ-ಪರ್ಯಾಯೋಕ್ತಿ ಅಲಂಕಾರ] ರಾಯತನದ+ಅಭಿ

ಮುಖದ–ಅರಸುತನಕ್ಕೆ ಸಿದ್ಧನಾದ; ಕಮಲ+ದಳ(ಎಸಳುಗಳಂಥ)+ಆಯತ (ವಿಶಾಲ)+ಅಂಬಕ–ಕಣ್ಣುಗಳುಳ್ಳ (ಬಹುವ್ರೀಹಿ) ಮುನಿರಾಯ–ವಸಿಷ್ಠ. ನೇಮ–ಅಪ್ಪಣೆ; ಮಾಡಬೇಕಾದುದೇನು?

84. ಮನುಕುಲ....–ಮನುವಿನ ವಂಶವೆಂಬ (ಅಂಬರ) ಆಕಾಶವನ್ನು (ಗಗನಮಣಿ) ಸೂರ್ಯನಂತೆ ಬೆಳಗುವ (ರಾಮ)ನೇ ಬಂದೆಯಾ! ಮನಃ+ರಥ–ಬಯಸ ತಕ್ಕ. ಸೂನೃತ (ಸತ್ಯವೆಂಬ)+ವ್ರತ (ನಿಯಮ)ವುಳ್ಳವನು, ಸತ್ಯವನ್ನೆ ಆಚರಿಸುವವನು. ಅರೆದಿಟ್ಟ–ಅರ್ಧದೃಷ್ಟಿ ಅರೆಗಣ್ಣು. ತಗಹು–ನಿರ್ಬಂಧ. ನಾನು+ಒಂದ ನೆನವರೆ....ಬೇರೆ+ಒಂದ ನೆನೆದುದು–ನಾನು ರಾಮನಿಗೆ ಪಟ್ಟಕಟ್ಟಲು ಬಗೆದೆನು; ಅವನಿಗೆ ಮಾತ್ರ (ದುರ್ದೈವದಿಂದ) ಅರಣ್ಯವಾಸವಾಗುವಂತಾಯಿತು (ಲಲಿತಾಲಂಕಾರ). ಮೇಲೆ+ಉತ್ತರಕೆ–ಮುಂದೆ ಹೇಳುವುದಕ್ಕೆ. ಘಾತಾಳಿ–ದುಷ್ಟೆ. (ಸ್ವಭಾವ ತೋರಿಸುವ 'ಆಳಿ' ಪ್ರತ್ಯಯ). ಬಾಳ (ಕತ್ತಿ)+ಚಾಚಿದಳು+ಇವಳು+ಎನಗೆ ಗೋನಾಳಿಗೆ (ಕೊರಳಿಗೆ)+ಒಡ್ಡಿದಳ್–ನನ್ನ ಕೊರಳನ್ನು ಕತ್ತಿಯನ್ನೆತ್ತಿ ಹೊಡೆಯಲು ಇವಳು ಸಿದ್ಧಳಾದಳು. ನರಸುಕ್ಕಂ–ನರಗಳು ಸುಕ್ಕಿಕೊಳ್ಳುವ ವಿಷವನ್ನು. (ಲಲಿತ.)–ನನ್ನ ನಾಲಗೆಯು ಆಡದಂತೆ ನನ್ನ ವಿನಾಶವು ಸಾಧಿಸುವಂತೆ ಮಾಡಿದಳು. ಹುಸಿ (ಸುಳ್ಳು)+ಸಂಜನಿಸದು (ಉಂಟಾಗದು). ಒಳಗು (ಅಭಿಪ್ರಾಯ)+ಅರಿಯದೆ. ಅಧಿರಾಜತ್ವ–ಹಿರಿಯರಸುತನ. ಮರುಳುದಲೆ–ತಪ್ಪುವಿಕೆ. ಇನಿತು ದೊಡ್ಡಿತೆ–ಇಷ್ಟು ಪ್ರಯಾಸ ಪಡಬೇಕೆ? ಮನುವಂಶದರಸುಗಳು ಸುಳ್ಳಾಡತಕ್ಕವರಲ್ಲೆಂದು ವರ ಬೇಡಿದೆನು. ಇವನು ಸತ್ಯತಪ್ಪಿ ನಡೆವನಾದರೆ, ಪ್ರಯಾಸವೇಕೆ? ರಾಮನಿಗೇ ಪಟ್ಟಕಟ್ಟಿರಿ!

84. ಚರಿಸುವೆನು (ಕೈಕೊಂಡು ನಡೆಸುವೆನು) ವನವಾಸವನ್ನು. ಗೋಚರಿಸುವೆನು....–ನೀವು ಹೇಳಿದ ವರ್ಷಗಳು ಕಳೆವ ಪರಿಯಂತರ ನಾನು ಅರಣ್ಯದಲ್ಲಿ ಇರುವೆನು. ಉರ್ವಿಳಾಪತಿ–ಲಕ್ಷ್ಮಣ. ಮೇಣ್–ಅಥವಾ. ಹೊಯ್ಲು–ಹೊಡೆತ. ಹೆರೆ+ಕಳೆದ–ಹೆರೆಯುಚ್ಚಿದ (ಹಾವಿಗೆ ಆಗ ತಾನೆ ಕೋಪವು ಹೆಚ್ಚು) ನಿಡಿದು+ಉಸಿರಿನ–ಉದ್ದ ಶ್ವಾಸ ಬಿಡುವ. ಹಲು ಮೊರೆ–ಹಲ್ಲು ಕಡಿ. [ಅದೋ ಇದೋ ಎಂದು ಸಂದೇಹ ಸೂಚಿಸುವ, ಸಂದೇಹಾಲಂಕಾರ] ಅಯ್ಯ (ಆರ್ಯ)–ಪೂಜ್ಯ. ಕಷ್ಟವ ಬಗೆದ–ರಾಮನ ವಿಷಯ ಕಠಿಣ ಆಲೋಚನೆ ಮಾಡಿದ. ಕೈಕೆಯ ಕಾಳುತೊತ್ತಿರ ಜಗಳ–ಕೈಕೆ ಮತ್ತು ಅವಳ ಹಾಳು ದಾಸಿಗಳ ಸಂಬಂಧದಿಂದ ಉಂಟಾದ ಜಗಳ. ಆಕ್ಷೇಪಿಸಿ ಮಾತೆತ್ತುವರ ಬಾಯಿಯನ್ನು ಹೊಯ್ಯುವೆನು (ಬಡೆವೆನು). ಕೈಮಿಗು–ಮೀರು. ಧರಣಿಜಾ+ಈಶ–ಸೀತಾಪತಿ, ರಾಮ. ಜನಕನು ಯಜ್ಞಾರ್ಥವಾಗಿ ಭೂಮಿಯನ್ನು ಉಳುವಾಗ ನೇಗಿಲಸಾಲಲ್ಲಿ ದೊರೆತ ಮಗುವನ್ನು ಹೆತ್ತ ತಾಯಿಯು ಭೂದೇವಿಯೇ ಎಂದೆಣಿಸಿ, ಧರಣಿಜೆಯೆಂದೂ ಸೀತೆಯೆಂದೂ ನಾಮಕರಣ ಮಾಡಿ

ದನು. ನೆರವಿಗರು–ಸಮೀಪದಲ್ಲಿದ್ದವರು. ಸುಮಿತ್ರೆಯ ಮಗ ಸೌಮಿತ್ರಿ. ಜನಕನ ಮಗಳು ಜಾನಕಿ.

85-86. ಮುದುಗರ–ಮುದಿ ಭ್ರಾಂತಿ. ಪಿತ್ತದ ಬವಳಿ ಬಲಿತುದು–ಪಿತ್ತದ ತಲೆ ತಿರುಗುವಿಕೆ ಬಲವಾಗಿದೆ. ನಿವಗೆ (ರಾಮನಿಗೆ) ನಿಮಗೆ. ತಂದೆಗೆ ಮುದಿ ಭ್ರಾಂತಿ, ಕೈಕೆಗೆ ಪಿತ್ತಭ್ರಮಣ,–ಇವರಿಬ್ಬರ ಮಾತಿಗೆ ಬೆಲೆ ಇಲ್ಲ. ವಸಿಷ್ಠ ಸುಮಂತ್ರರು ನಮ್ಮವರೇ. ಹೀಗಿರಲು, ಭರತಗೆ ರಾಜ್ಯ, ನಿಮಗೆ ವನವಾಸ,–ಎಂಬುದು ಮೋಸಗಾರಿಕೆಯಲ್ಲವೆ? ಆಸುರ (ಮೂರ್ಖರಾದ ರಾಕ್ಷಸರು ಮಾಡುವ)+ಕರ್ಮ (ಕೆಲಸ)–ತಂದೆಯ ಮಾತನ್ನು ಮೀರಿ ಅವನ ಸತ್ಯನಾಶವನ್ನು ಸಾಧಿಸುವುದು. ಸತ್ಯ ಪ್ರತಿಜ್ಞರು–ಸತ್ಯವನ್ನು ಬಿಡೆನೆಂಬ ವ್ರತವುಳ್ಳವರಿಗೆ. ಉಚಿತವೆ (ತಕ್ಕುದೆ?) ಸೊಮ್ಮು–ನಿಯಮ. ಕಾಲ–ಈ ಸಮಯ. ಮೇಲಣವರು–ನಮ್ಮ ಧರ್ಮವನ್ನು ಪರೀಕ್ಷಿಸಲು ಆಕಾಶದಲ್ಲಿ ನಿಂದಿರುವ ದೇವತೆಗಳು. ಅನೃತಕೆ–ಭೂಸಂಪತ್ತೆಂಬ ಸುಳ್ಳಾದುದಕ್ಕೆ ನಾವು ಸೋಲುವುದೆ? ಅತಿಕಳೆದು–ಮೀರಿ. ಇದು–ತಂದೆಯ ಮಾತನ್ನು ಮೀರುವ ಈ ಅಧರ್ಮವು ಆ ಸಂಪತ್ತನ್ನು ಹಾಳು ಮಾಡದೆ? ಚಿತ್ತವ ತಿಳುಹಿ–ಮನಸ್ಸಿಗೆ ಸಮಾಧಾನ ಮಾಡಿ. ಸಂದಿಹುದು–ಮನಸ್ಸು ಇಟ್ಟಿರುವುದು. ಸಹ (ಸಂಗತ)+ಭವ–ಹುಟ್ಟಿದವ, ತಮ್ಮ.

86. ಕೈಗಲ್ಲ–ಗಲ್ಲಕ್ಕೆ ಕೊಟ್ಟಿರುವ ಕೈ (ಕರ್ಮಧಾರಯ). ಶೈಲ (ಪರ್ವತ)+ಜೆ (ಮಗಳು) ಪಾರ್ವತಿ. ಬೆರಗುಗಳ ಶೋಕದಲಿ–ಆಶ್ಚರ್ಯದಿಂದ ಕೂಡಿದ ದುಃಖದಿಂದ. ವಲ್ಕಲ–ನಾರುಬಟ್ಟೆ. ನಿಮ್ಮ ಪದ ರಾಜೀವದ+ಓಲಗ–ನಿಮ್ಮ ಪಾದಕಮಲದ ಸೇವೆ. ಅವಲಂಬನ–ಆಶ್ರಯ. ನಿಮ್ಮ....–ನೀವು ದಯೆಯಿಟ್ಟು ನನ್ನನ್ನೂ ನಿಮ್ಮೊಡನೆ ಕರೆದುಕೊಂಡು ಹೋದರೆ. ಅರಸಿ–ಕೈಕೆ. ಕಿರುನಗೆ+ಬೆರಸಿ–ನಸುನಗುತ್ತ. ಬಾಳವ–ಹಣೆಯನ್ನು. ದೇಹದ...–ಶರೀರವನ್ನು ಹಿಂಬಾಲಿಸುವ ನೆಳಲಿನಂತಿದ್ದು. ಅನ್ಯತ್ರ (ಬೇರೆ)+ಗತಿ (ಆಶ್ರಯ). ಸುರಭಿ–ಪರಿಮಳ. ಸುಧಾ (ಅಮೃತ)+ಅಂಶು (ಕಿರಣ)+ಬಿಂಬ (ಮಂಡಲ)–ಚಂದ್ರಮಂಡಲವನ್ನು. [ವರ್ಣಿಸಬೇಕಾದ ಮತ್ತು ವರ್ಣಿಸಲಗತ್ಯವಿಲ್ಲದ ವಿಷಯಗಳನ್ನೆಲ್ಲ ಒಂದೇ ಧರ್ಮದಲ್ಲಿ ಸೇರಿಸಿ ಹೇಳುವುದು,–ದೀಪಕಾಲಂಕಾರ.]

87. ರನ್ನೆ (ತ್ಸ–ರತ್ನಾ), ಪ್ರಿಯಳೆ! ಬಳಲಿಕೆ....–ನೀನು ಆಯಾಸಪಡಲು ನಾನು ಸಮ್ಮತಿಸಲಾರೆ. ಮುಂದಣ (ಉಪಯೋಗಕ್ಕೆ) ಕ್ಷೌಮ+ಅಂಬರ–ನಾರುಬಟ್ಟೆ. ಕ್ಷುಮ–ಕಿತ್ತಾನಾರು; ಅದರಿಂದಾದುದು ಕ್ಷೌಮ. ಮುನ್ನ–ಮೊದಲು. ವಿಷಣ್ಣರು ಬಳಲಿದವರು. ಪರಿಸರದ (ಸುತ್ತ ಬಳಸಿದ)+ಆಳುಮೋಳದಲಿ (ಜನರ ಕೂಡೆ) ಅಪನ್ನಪಟುರವ–ದುಃಖದಿಂದ ಉಂಟಾದ ಧ್ವನಿ. ಅಶ್ರುಧಾರಾ–ಕಣ್ಣೀರ ಧಾರೆಯನ್ನು.

ಒಸರಿದರು-ಸುರಿದರು. ಸುರಗಿ(ತ್ಸ-ಛುರಿಕಾ) ಕತ್ತಿ. ಕಟಿ-ಸೊಂಟ. ಚಾಪಮಾರ್ಗಣ-ಬಿಲ್ಲುಬಾಣ. ಗುರು (ವಸಿಷ್ಠ ಮತ್ತು ದಶರಥ) ಪಾದಕ್ಕೆ-ಕಾಲಿಗೆ. ವೈದೇಹಿ-ವಿದೇಹರಾಜ ಜನಕನ ಮಗಳು. ಪೊರಮಡು-ಹೊರಡು. ಆ ಕ್ರಮದಿಂದ-ಅಣ್ಣನಂತೆಯೆ. ಸಂಧಿಸಿ-ಭೇಟಿಯಾಗಿ. ಬೀಳ್ಕೊಡೆ-ಅಪ್ಪಣೆ ಕೇಳಲು. ಎನ್ನಂತೆ-ತಾಯಿಯಂತೆ. ವನವೆ ಅಯೋಧ್ಯೆಯನ್ನು. ಹರಿ (ಭಕ್ತರ ಕಷ್ಟಗಳನ್ನು ಕಾಪಾಡುವ) ವಿಷ್ಣುವು. ಜಗತ್+ರಕ್ಷೆ-ಲೋಕಪಾಲನೆ (ಜಶ್ತ್ವಸಂಧಿ). ಸುಧಾಸಾಗರ-ಪಾಲ್ಗಡಲು. ದಶಗ್ರೀವ-ಹತ್ತು ಕೊರಳುಳ್ಳವ, ರಾವಣ. ಹರಣ-ಪ್ರಾಣ. ಶಂಕರ-ಶಿವ. ವಿ (ಹಂಸ) ರಿಂಚಿ (ಸಂಚರಿಸುವವ) ಬ್ರಹ್ಮ. ಆನಕ-ಭೇರಿ,-ಜಯವನ್ನು ಸೂಚಿಸುವ ಭೇರಿಯ ದೊಡ್ಡ ಶಬ್ದದಿಂದ. ಅರಳ-ಹೂವ. ರಾಮನು ರಾವಣ ವಧಾರ್ಥವಾಗಿ ಹೊರಟನೆಂದು ಇಂದ್ರಾದಿಗಳೂ ಸಂತೋಷಪಟ್ಟರು.

೪೪. **ವಿಭೀಷಣ ರಾವಣ ಸಂವಾದ:**— ಈತ (ಇವ) ಗಳ-ಬಹುವಚನ ಇವರ (ಈತಂಗಳ್). ಬಣ್ಣನೆ-ಹೊಗಳಿಕೆ (ತ್ಸವರ್ಣನೆ). ತಿಣ್ಣ-ಭಾರ. ತಿದ್ದು-ಪರಿಹರಿಸು. ರೂಪಿಸು-ಹುಟ್ಟು. ಮಣ್ಣು (ಪಾಲಾಗಿ) ಕೂಡಿಸು. ಉಣ್ಣು-ಅನುಭವಿಸು. ಉರಿ—ನಾಶವಾಗು. ಭ್ರಮೆ—ಹುಚ್ಚು. ಸೋಕು—ಸಿಗು. ಮದೋನ್ಮತ್ತ....-ಗರ್ವದಿಂದ ಸೊಕ್ಕಿರುವ ಇವರು ಸೊಕ್ಕಿನಿಂದ ಬಗುಳಿದರೆ. ಕಕುತ್ಸ್ಥಜ-ಕಕುತ್ಸ್ಥನೆಂಬ ಅರಸನ ವಂಶದಲ್ಲಿ ಹುಟ್ಟಿದವನಾದ ರಾಮನು. ವನ+ಓಕಸರು-ಕಾಡುನಿವಾಸಿಗಳು (ವೃದ್ಧಿಸಂಧಿ) ಕಪಿಗಳು. ಲೋಕಕಂಟಕರ....-ದುಷ್ಟರ ವಿನಾಶಕ್ಕಾಗಿ ಹರಡಿದ ಬಲೆ. ಸೂರ್ಯವಂಶದ ಪುರಂಜಯನೆಂಬ ಅರಸು ಇಂದ್ರನ ಸಹಾಯಕ್ಕಾಗಿ ಯುದ್ಧಕ್ಕೆ ಹೋಗಿರಲು, ಇಂದ್ರನು ಎತ್ತಿನ ರೂಪವನ್ನು ಧರಿಸಿ ಆವನಿಗೆ ವಾಹನವಾದನು. ಆ ಎತ್ತಿನ ಕಕುತ್ತಿನ (ಹಿಣಿಲ) ಮೇಲೆ ಕುಳಿತು ಇವನು ಯುದ್ಧಮಾಡಿದನೆಂದು ಕಕುತ್ಸ್ಥನೆಂದು ಆವನು ಹೆಸರಾಂತನು. ಅಲ್ಪನೆ? ಮಹಾಕುಲದಲ್ಲಿ ಹುಟ್ಟಿದವರು ನೀಚಕಾರ್ಯಗಳನ್ನು ಮಾಡುವರೆ? ಪುಲಸ್ತ್ಯಋಷಿಗೆ ಮಗನಾದ ವಿಶ್ರವಸುವಿನಿಂದ ಹುಟ್ಟಿರುವ ನೀನೂ ಋಷಿಪುತ್ರನೆನಿಸಿ ನೀಚಕಾರ್ಯ ಮಾಡುವುದೆ? ಬರಡ-ಮೂರ್ಖ. ಶ್ರುತಿ-ವೇದ. ಜಾರರ ಜೋಲಿ-ವ್ಯಭಿಚಾರಿಗಳ ಸ್ವಭಾವ. ಅಜ-ಬ್ರಹ್ಮ. ಮುಖ+ಉದ್ಗತವು-ಬಾಯಿಪಾಠವು. ಕಜ್ಜುದಯ್ದವ-ತಮಾಸುರ. ಅಂಬುಧಿ ಮಥನ-ಸಮುದ್ರ ಮಥನ. (ಮಂದರ) ಗಿರಿ. ಕ್ರತು (ಯಜ್ಞ) + ಭುಜ (ಉಣ್ಣುವವ)-ದೇವತೆ. ಕು (ಮಂದ)+ಊರ್ವ (ಚಲನವುಳ್ಳದು)-ಆನೆ. ತಳ-ಪಾತಾಳ. ಅತುಳ (ಮಿತಿಯಿಲ್ಲದ) ಬಲ (ವುಳ್ಳ) ಖಳ-ರಾಕ್ಷಸನಾದ ಹಿರಣ್ಯಾಕ್ಷನನ್ನು. ಅಸು-ಪ್ರಾಣ ಕ್ರೋಢ-ಕಾಡುಹಂದಿ. 1. ಮಹಾಪ್ರಳಯದ ಅಂತ್ಯದಲ್ಲಿ ಯೋಗನಿದ್ರಾರೂಢನಾದ ಬ್ರಹ್ಮನ ಮುಖದಿಂದ ಹೊರಟ ವೇದಗಳನ್ನು ತಮಾಸುರನು ಕದ್ದೊಯ್ದನು. ಅವೇ

ಲೋಕಕ್ಕೆ ಕಾರಣವೆಂದು, ಅವನ್ನು ವಿನಾಶಪಡಿಸಲೆಣಿಸಿದನು. ವಿಷ್ಣುವು ಮತ್ಸ್ಯಾಕೃತಿಯಿಂದ ಅವನನ್ನು ಕೊಂದು ವೇದಗಳನ್ನು ತಿರುಗಿ ತಂದನು. 2. ಅಮೃತಕ್ಕಾಗಿ ದೇವದಾನವರು ವಾಸುಕಿಯನ್ನು ಹಗ್ಗವನ್ನಾಗಿ ಮಾಡಿ ಮಂದರಗಿರಿಯೆಂಬ ಕಡೆಗೋಲಿಂದ ಸಮುದ್ರವನ್ನು ಮಥಿಸುತ್ತಿರಲು, ಅದು ಭಾರವಾಗಿ ಮುಳುಗುವಾಗ, ವಿಷ್ಣುವು ಕೂರ್ಮರೂಪದಿಂದ ಅದನ್ನು ಬೆನ್ನಲ್ಲಿ ಧರಿಸಿದನು. 3. ಹಿರಣ್ಯಾಕ್ಷನು ಯಾಗನಾಶಕ್ಕಾಗಿ ಭೂಮಿಯನ್ನು ಕದ್ದೊಯ್ದು ಪಾತಾಳದಲ್ಲಿರಿಸಲಾಗ, ವಿಷ್ಣುವು ಕಾಡುಹಂದಿಯ ರೂಪದಿಂದ ಅವನನ್ನು ಸೀಳಿ, ಭೂಮಿಯನ್ನು ಉದ್ಧರಿಸಿದನು.

89. ಸುರವಿರೋಧಿ–ದೇವಶತ್ರುವಾದ ಹಿರಣ್ಯಕಶಿಪು. ಹಿಸಿದು–ಬಗೆದು. ನರ (ಮನುಷ್ಯ+ಹರಿ (ಸಿಂಹ). ವಸುಧೆ....–ಭೂಮಿಗೆ ಅತ್ಯಂತ ಸಂತೋಷವಾಗುವಂತೆ. ವಾಮನ–ಕುಳ್ಳ. ತಮ್ಮನನ್ನು ಕೊಂದುದಕ್ಕಾಗಿ ವಿಷ್ಣುದ್ವೇಷದಿಂದ ಹಿರಣ್ಯಕಶಿಪುವು ತನ್ನ ಪುತ್ರನಾದ ಪ್ರಹ್ಲಾದನಿಗೆ ಹರಿನಾಮವನ್ನುಚ್ಚರಿಸಬಾರದೆನ್ನಲು, ಅವನನ್ನು ಚಾವಡಿಯ ಕಂಬಕ್ಕೆ ಬಿಗಿದು ಹೊಡೆವಾಗ, ನರಸಿಂಹನು ತಲೆದೋರಿ ರಕ್ಕಸನನ್ನು ಸೀಳಿದನು. ಭೃಗುಋಷಿಯ ಪುತ್ರಭಾರ್ಗವ. ಕೊಡಲಿಯ ರಾಮ. ಹೆಚ್ಚಿಸಿದನು–ಗೌರವಕ್ಕೆ ತಂದನು. ತಿಣ್ಣದ ಕಿಚ್ಚು–ಭಯಂಕರ ಬೆಂಕಿ....–ರಾಕ್ಷಸ ವಂಶದ ನಾಶಕ್ಕಾಗಿ ದೊಡ್ಡದೊಂದು ಬೆಂಕಿ(ರಾಮ)ಎದ್ದಿದೆ! ಭುವನಮಾತೆ–ಪ್ರಪಂಚಕ್ಕೇ ತಾಯಾದ ಸೀತೆ. ಮನ್ನಣೆ–ಕ್ಷಮೆ. ಕೈರವಸಖ–ನೈದಿಲೆಯ ಮಿತ್ರ ಚಂದ್ರ. ವನಜಸಖ–ತಾವರೆಯ ಮಿತ್ರ ಸೂರ್ಯ. ಇವರಿಬ್ಬರೂ ಇರುವ ತನಕ (ಅನ್ನೆಬರ). ದುರ್ಜನರ ಗರುಡಿ–ದುಷ್ಟರ ಸಹವಾಸ. ಗಳಹು–ಬಗುಳು. ಮಗನ ಮಗನು ಮೊಮ್ಮಗ; ಮೊಮ್ಮಗನ ಮಗ ಮರಿಮಗ. ಹಂದೆ–ಹೇಡಿ.

90. ಖರನನ್ನು–ಸೂದನ (ಕೊಂದವ) ರಾಮ. ಅನ್ವಯ–ವಂಶ. ಸಂ (ಚೆನ್ನಾಗಿ) ಬಾಧಕ. ಹುಟ್ಟಿಸುವ–ಶರ (ಬಾಣವೆಂಬ)+ಪರಶು (ಕೊಡಲಿ). ಕೊರಳ ಹಳುವ–ಕೊರಳೆಂಬ ಕಾಡು. ಬೀದಿಪರಿವುದು–ಬೇಕಾದತ್ತ ತಿರುಗುವದು; ತಡೆಯಿಲ್ಲವೆಂದರ್ಥ (ಪರಿಣಾಮಾಲಂಕಾರ). ತೆಳುವಾದ ಹೊಟ್ಟೆಯುಳ್ಳವಳು–ತಳ+ಉದರಿ, ಸೀತೆಲಯ (ಪ್ರಲಯದ)+ಫಾಳ (ಹಣೆ)+ನೇತ್ರನು(ಕಣ್ಣುಳ್ಳವನು), ಪ್ರಳಯರುದ್ರನು. ಭೀಮರೌದ್ರಕರಾಳಕೆ–ಅತ್ಯಂತ ಭಯಂಕರ ಸ್ವರೂಪಕ್ಕೆ [ಈ ಮೂರೂ ಪದಗಳಿಗೆ ಅರ್ಥ ಒಂದೇ. ಅತ್ಯಂತವೆಂದು ತೋರಿಸಲು ಮೂರನ್ನೂ ಪ್ರಯೋಗಿಸಿದೆ] ಬೀಳ (ಬೀಳುವಂತೆ)+ಹೊಯ್ (ಹೊಡೆ). ಕಾಳಮೂಳ–ಕಡುದುಷ್ಟನು. ಚಂದ್ರ (ಕಾಂತಿಯಲ್ಲಿ ಚಂದ್ರನನ್ನು)+ಹಾಸಕ–ನಗುವುದು; ಶಿವನು ರಾವಣನಿಗೆ ಮೆಚ್ಚಿ ಕೊಟ್ಟ ಕತ್ತಿಯ ಹೆಸರು. ಜಡಿ–ಬೀಸು. ಕೈಕಸೆ....ಸೋದರನು. ಬಿಡೆಯ–ದಾಕ್ಷಿಣ್ಯ. ಜಿಹ್ವೆ–ನಾಲಗೆ. ತಾಳ....–ತಮ್ಮನನ್ನು ಕೊಂದವನೆಂಬ ಅಪಕೀರ್ತಿಯನ್ನು ತಾಳ

ಬೇಕಾಗುವುದು. ಸುರಪತಿಬಲವ ಮುರಿದ–ಇಂದ್ರನ ಬಲ ಮುರಿದ ಇಂದ್ರಜಿತು. (ಇಂದ್ರನು ರಾವಣನನ್ನು ಗೆದ್ದು ಸೆರೆಯಲ್ಲಿಟ್ಟಾಗ, ರಾವಣ ಪುತ್ರನಾದ ಮೇಘನಾದನು ಇಂದ್ರನನ್ನು ಸೋಲಿಸಿ ತಂದೆಯನ್ನು ಬಿಡಿಸಿದುದರಿಂದ, ಇಂದ್ರಜಿತು ಎಂಬ ಬಿರುದು ಪಡೆದನು.) ವಿ [ಹೆಚ್ಚಾಗಿ]+ಭೀಷಣ (ಶತ್ರುಭಯಂಕರನು.) ನಮ್ಮ....–ನಾವೇ ಹೊರಟುಹೋಗುವೆವು. ಸುಜನಜನ+ಏಕ ಚೂಡಾಮಣಿ- ಸಜ್ಜನರಲ್ಲಿ ಶಿರೋಮಣಿ. ರಾಮನನ್ನು ಕಾಣಲಾಗುವುದೆಂದು ಮಹೋತ್ಸವ ತಳೆದು. ಶ್ರೀಕರ (ಲಕ್ಷ್ಮಿಯ ಕೈ)+ಅಗ್ರ (ತುದಿ)+ಸುಕುಂಕುಮ+ಅಂಕಿತ (ಗುರುತು ಮಾಡಲ್ಪಟ್ಟ) ಸೌಕುಮಾರ–ಸುಂದರ. ಉರಸ್ಥಲನ–ಎದೆಯುಳ್ಳವ. ಲೋಕದಲ್ಲಿ ವಿಶೇಷವಾಗಿ ಪೂಜ್ಯನಾದ ಒಬ್ಬ ರಾಮನ.

91. **ಪಾರ್ವತೀ ಪರಿಣಯ:**—ದಕ್ಷ ಕನ್ಯೆಯಾದ ದಾಕ್ಷಾಯಿಣಿಯು (ಸತೀ) ಶಿವನ ಹೆಂಡತಿ. ಒಂದು ದಿನ ದಕ್ಷನು ತನ್ನ ಮಗಳಂದಿರ ಮನೆಗೆ ತೆರಳಿ ಎಲ್ಲರಿಂದಲೂ ಆದರಾತಿಥ್ಯ ಪಡೆದು ಶಿವನಲ್ಲಿಗೂ ಬಂದನು. ಅಲ್ಲಿ ಶಿವನು ಮಾತ್ರ ಅವನನ್ನು ಉಪಚರಿಸಲಿಲ್ಲ. ಇದರಿಂದ ದಕ್ಷನು ಸಿಟ್ಟಾಗಿ, ತಾನೊಂದು ಯಜ್ಞವನ್ನು ಮಾಡಿ ಅದಕ್ಕೆ ಉಳಿದೆಲ್ಲ ತನ್ನ ಹೆಮ್ಮಕ್ಕಳನ್ನೂ ಅವರ ಗಂಡಂದಿರನ್ನೂ ಕರೆಸಿಕೊಂಡನು. ಸತೀಗೆ ಹೇಳಲೆ ಇಲ್ಲ. ಅವಳು ತಾನಾಗಿಯೆ ಈ ಯಜ್ಞಕ್ಕೆ ಬಂದಳು. ಅಲ್ಲಿಯೂ ಶಿವನನ್ನು ಅವಳ ಇದಿರಲ್ಲೇ ನಿಂದಿಸಲು, ಆ ನಿಂದೆ ತಾಳಲಾರದೆ, ಸತಿಯು ಅದೇ ಯಜ್ಞಕುಂಡದ ಬೆಂಕಿಯಲ್ಲಿ ಹಾರಿ ಪ್ರಾಣತ್ಯಾಗ ಮಾಡಿದಳು. ದಕ್ಷ ಪುತ್ರಿ ದಾಕ್ಷಾಯಿಣಿ. ಮಹಾ+ಉಗ್ರ (ಗುಣಸಂಧಿ)–ಬಹುಕೋಪ. ಸವನ ಶಾಲೆ–ಯಜ್ಞಶಾಲೆ. ಗುರು–ಗಂಡ. ನಿರಾಕರಣ–ತಿರಸ್ಕಾರ. ಸ್ವಾಹಾ (ದೇವಿಯ) ಧವ (ಗಂಡ)–ಅಗ್ನಿ. ಭರ್ಗ–ಶಿವ. ಜಡೆ (ತ್ಸ–ಜಟಾ) ಅಪ್ಪಳಿಸು–ನೆಲಕ್ಕೆ ಬಡೆ. ಎಂಟು+ದೆಸೆ–ಎಣ್ದೆಸೆ (ದ್ವಿಗು) ಪಾರ್ವ–ಭೃಗು. ತುಡುಕಲು–ಹಿಡಿಯಲು. ಸತಿ-ಹೆಂಡತಿಯಾದ ಪ್ರಸೂತಿಯು. ಅಳಿಕನೇತ್ರನು–ಹಣೆಯಲ್ಲಿ ಕಣ್ಣುಳ್ಳ ಶಿವನು. ಮಂಗಳ ಸೂತ್ರ–ಮುತ್ತೈದೆಯರು ಕೊರಳಿಗೆ ಕಟ್ಟುವ ಕರಿಮಣಿ. ಕರಿಮಣಿಯನ್ನು ಕಾಪಾಡು ಎಂದರೆ ಗಂಡನನ್ನು ಬದುಕಿಸು ಎಂದರ್ಥ. ಪಲ–ಹಲವು. ಯೋಗ–ತಪಸ್ಸು. 'ಮತಂಗ ಪರ್ವತ' ಹಿಮಾಲಯದ ಇನ್ನೊಂದು ಹೆಸರು. ಒಲುಮೆ–ವಿಶ್ವಾಸ. ಕ್ಷಿತಿ (ಭೂಮಿ)+ಧರ (ಧರಿಸುವುದು)+ಇಂದ್ರ (ಶ್ರೇಷ್ಠವಾದುದು)–ಹಿಮಾಲಯ ಪರ್ವತವು. ಇಂದು ಮೌಳಿ (ತಲೆಯಲ್ಲಿ ಚಂದ್ರನಿರುವವನು.) ಶಿವ; ಇಂದು ಶೇಖರನು. (ಬಹು ವ್ರೀಹಿ.)

92. ಪಲ+ಕಾಲ–ಬಹುಕಾಲದ ವರೆಗೆ. ಇನಿಯ–ಪ್ರಿಯ. ಪ್ರಸನ್ನತೆ–ಸಂತೋಷ. ಶಿವಯೋಗದೀಕ್ಷಾ+ಆನಂದವನು–ಶಿವನ ಧ್ಯಾನವೆಂಬ ವ್ರತದಿಂದ ಉಂಟಾದ ಸಂತೋಷವನ್ನು. (ಶಿವಧ್ಯಾನ ವ್ರತವನ್ನು) ಆದಿ+ಅಖಿಲ (ಮೊದಲಾಗಿ

ಎಲ್ಲ-ಯಣ್ಸಂಧಿ) ನಿರ್ಜರರು (ಜರಾ—ಮುದುತನ) ದೇವತೆಗಳು. ಸನುಮತ—ಒಪ್ಪಿಗೆ. ಅ+ಭವ (ಜನ್ಮ)—ಶಿವ. ದನುಜರನ್ನು ಹರ—(ನಾಶಮಾಡುವವ.) ಅಂಗಜ—(ಮನಸ್ಸಿನಲ್ಲಿ ಹುಟ್ಟುವವನು) ಮನ್ಮಥನು. ಮೃಡ—ಶಿವ. ವರಿಸ+ಒಲು—ಮದುವೆಯಾಗುವಂತೆ. ತುಡುಶರಗಳ—ಮನಸ್ಸನ್ನು ಮೋಹಿಸುವ ನಿನ್ನ ಬಾಣಗಳನ್ನು ಬಿಲ್ಲಿಗೆ ಜೋಡಿಸು. ಈ+ಎಡೆ—ಸ್ಥಳ. (ಶಿವನಿದ್ದ ಸ್ಥಳ)ವೆಂದು ವಿಶ್ವಾಮಿತ್ರನು ರಾಮನಿಗೆ ತೋರಿಸಿದನು. ಸಡಗರದ—ಸಂಭ್ರಮದಿಂದ ಕೂಡಿದ. ಗಡಣ—ಸಮೂಹ. ಅಚ್ಚರಿ—(ತ್ಸ—ಆಶ್ಚರ್ಯ) ಸ್ಮರ (ಮನಸ್ಸಿನಿಂದ ಮಾತ್ರ ಯೋಚಿಸಲ್ಪಡುವವನು) ಮನ್ಮಥ. ಕದನ—ಯುದ್ಧ. ಪದುಳ—ಸಂತೋಷ. ಶಶಿ, ಚೈತ್ರ ಎಂಬ. ಚಮೂ+ಪ—ಸೇನಾಪತಿ. ಉಜ್ಜುಗ (ತ್ಸ—ಉದ್ಯೋಗ) ಪದಿಲಗೊಂಡು—ಅನುಕೂಲಪಡಿಸಿಕೊಂಡು. ಪಲವಂದದ—ಬಹು ವಿಧದ. ಕಾರ್ಯದ ಹದನ—ಶತ್ರುವನ್ನು ಹೇಗೆ ಜಯಿಸಬೇಕೆಂಬ ಸ್ಥಿತಿ. ತಣ್ಣಿತು+ಎಲರ್—(ತಂಪೆಲರ್) ತಂಗಾಳಿ.

93. ಉಸುರಿದುದು ಅಲ್ಲಿ. ಗೆಲವು-ಸಂತೋಷ. ಆಗ (ಪರ್ವತ)+ಜಾತೆ-ಪಾರ್ವತಿ. ಯೌವನ ಕಲಾವಿಭ್ರಮ-ಪ್ರಾಯದಿಂದ ಉಂಟಾದ ಕಾಂತಿ ವಿಶೇಷತೆಯಿಂದ. ಅನುಗುಣ-ಅನುಕೂಲ. ಕಂದರ್ಪ-ಮನ್ಮಥ. ಮುಸ್ತೈದೆ+ಆದನು-ಸಿದ್ಧನಾದನು. ತಳಿರು-ಚಿಗುರು. ನಳಿನೀದಳ-ಕಮಲದ ಎಲೆ. ಜೋಡು-ಅಂಗಿ. ಅರೆಬಿರಿದ-ಅರ್ಧ ತೆರೆದ. ತಾವರೆ (ತ್ಸ-ತಾಮರಸ) ಅಲರ-ಹೂ. ಚಲ್ಲಣ-ಇಜಾರು. ಪವಳವಳ್ಳಿ (ಪ್ರವಾಳ ವಲ್ಲೀ)-ಹವಳದ ಬಳ್ಳಿ. ದಟ್ಟಿ-ನಡುಕಟ್ಟು. ಮಲ್ಲಿಗೆ (ತ್ಸ-ಮಲ್ಲಿಕಾ) ಚೌಕುಳಿ-ನಾಲ್ಕು ಮುತ್ತುಗಳನ್ನು ಚೌಕವಾಗಿ ಬಿಗಿದ ಒಂಟಿ. ಮಂಜುಳ-ಮನೋಹರವಾದ. ಶಿರೀಷ-ಬಾಗಿಯ ಹೂ. ಅಳವಡಿಸು-ಧರಿಸಿಕೊಳ್ಳು. ಸುರಗಿ-ಸುರಗಿಯ ಹೂ ವೀರ ಕಂಕಣ-ವೀರರು ಧರಿಸುವ ಕಂಕಣ. ಅರ್+ಅಡಿ-ತುಂಬಿ (ಷಟ್ಪದಿ). ಹೆದೆ-ಬಿಲ್ಲಿನ ಹಗ್ಗ. ಘೋಡೆ-ಗುರಾಣಿ. ಪೊನ್ನಕದಳಿ-ಹೊಂಬಾಳೆ. ತೇಜಿ-ಕುದುರೆ. ಲಲಿತ-ಸುಂದರ. ಅಂತು-ತಡೆದು. ಸುಮ(ಹೂ) ಶರ (ಬಾಣ) ಕಲಿತ-ಕೂಡಿದ. ಮಹತರ (ದೊಡ್ಡ)+ಕಸೆ-ಬತ್ತಳಿಕೆ. ಇಕ್ಕೆಲ—ಎರಡು ಪಕ್ಕ. ಮಕರ+ಅಂಕಿತದ—ಮಕರದ ಗುರುತುಳ್ಳ. ಮೇಲು ನಿಶಾನಿ—ಎತ್ತರವಾದ ಬಾವುಟಗಳು. ಮುಂದು+ಪರಿಯೆ—ಮುಂದುವರಿಯಲು. ಕ್ರೌಂಚ—ನೀರಬಳಿ ವಾಸಮಾಡುವ ಹಕ್ಕಿ. ಚಕೋರ—ಚಂದ್ರ ಕಿರಣ ಹೀರುವುದೆಂಬ ಹಕ್ಕಿ. ಕಟಕ—ಸೇನೆ. ಸೂನ (ಹೂ)+ಶರ (ಬಾಣ)—ಮನ್ಮಥ. ಸನುಮಾನ—ಸನ್ಮಾನ. ಬಹುಮಾನ—ಉಡುಗೊರೆ. ಅವಧಾನ—ಎಚ್ಚರ.

93.94. ಆನಂದಯೋಗದೊಳ್-ಸಮಾಧಿಯೆಂಬ ಅವಸ್ಥೆಯಲ್ಲಿ; ತಪಸ್ವಿಗಳಿಗೆ ಆತ್ಮಸಾಕ್ಷಾತ್ಕಾರವಾಗುವಾಗ ಉಂಟಾಗುವ ಅವಸ್ಥೆ. ಎಡಪಂಕ-ಎಡಕಡೆ. ಮುಂಡಿಯ

ಪೂಡಿ—ಮುಂಡಿ ಹಾಕಿ. ಮೂಡಿಗೆ—ಬತ್ತಳಿಕೆ. ಗರಿಗರಿ ಒರೆಯಲ್—ಗರಿಗೆ ಗರಿ ತಿಕ್ಕುವಂತೆ (ಬಾಣಗಳು ವೇಗವಾಗಿ ವಾಯುವನ್ನು ಕತ್ತರಿಸಿ ಹೋಗುವಂತೆ ಅವುಗಳಿಗೆ ಹದ್ದಿನ ಗರಿಗಳನ್ನು ಕಟ್ಟುತಿದ್ದರು.) ಎಚ್ಚೊಡೆ—ಹೊಡೆಯಲು. (ಐದು—ಕಮಲ; ಅಶೋಕ, ಮಾವು, ಮಲ್ಲಿಗೆ, ನೀಲೋತ್ಪಲ ಎಂಬ ಪಂಚ ಬಾಣಗಳು.) ಅಂಗ(ಕೈ) ಸ್ವರುಪವಾಗಲು—ತಗಲಲು. ಊರ್ಧ್ವಮಾನಸವ—ಮೇಲಕ್ಕೇರಿದ, ಸಮಾಧಿಯಲ್ಲಿ ಹೊರಗಣ ವಿಚಾರಗಳನ್ನು ಪೂರ್ಣ ಬಿಟ್ಟಿರುವ ಮನಸ್ಸನ್ನು. ಕಳವಳಗೊಂಡು—ಚಂಚಲವಾಗಿ. ಮಮ(ತನ್ನದೆಂಬ) ಕಾರ—ಭಾವ, ಪ್ರೇಮ. ಪರಿಕಿಸು (ಪರೀಕ್ಷಿಸು—ತ್ಸ) ನೋಡು. (ಮದನನ ಐದು ಬಾಣಗಳಿಂದ ಐದು ಭಾವಗಳು ಉಂಟಾಗುವುವು:-ಮದನ, ಉನ್ಮಾದನ, ಸಂತಾಪನ, ಶೋಷಣ, ನಿಶ್ಚೇಷ್ಟಾಕರಣ.) ತತ್+ಮದನ+ಅಂಗ (ಮೈಯ)+ಭಸ್ಮವ (ಬೂದಿಯನ್ನು) ತಾಂಡವಮಾಡು—ಕುಣಿ. ಕುಸ್ತರಿಸಿ—ತಲೆಹಿಡಿದೆತ್ತಿ. ಆಗಮು—ಸಂಗತಿ. ನಗ (ಪರ್ವತ)+ಕುಲ+ಅಧಿಪ—ಪರ್ವತರಾಜ. ಮುದ್ದಿನ (ತ್ಸ—ಮುಗ್ಧ) ಸುಂದರಿಯಾದ. ಉಜ್ಜುಗಿಸು—(ಉದ್ಯೋಗಿಸು—ತ್ಸ) ಪ್ರಯತ್ನಿಸು. ಸಿಂಗರಿಸು (ತ್ಸ—ಶೃಂಗಾರ) ಮೃಗ (ಮೊಲವನ್ನು)+ಧರ (ಧರಿಸಿದ) ವನಾದ ಚಂದ್ರ+ಅಂಕನು—ಗುರುತುಳ್ಳವನು, ಶಿವನು. ಪಾಣಿ (ಕೈಯನ್ನು)+ಗ್ರಹಣ ಗೈದನು (ಹಿಡಿದನು) ಲಗ್ನವಾದನು.

94. **ಪ್ರಹ್ಲಾದ ಚರಿತ್ರೆ:**—ಹಿರಣ್ಯಕಶಿಪುವಿಗೆ ಪ್ರಹ್ಲಾದ, ಅನುಹ್ಲಾದ, ಸುಹ್ಲಲ್ಲಾದ, ಸಂಹ್ಲಾದರೆಂಬ ನಾಲ್ಕು ಮಕ್ಕಳು. ಗುರು(ವೆಂಬ)ಬುದ್ಧಿ; ಹರಿ(ಯಿರುವ ನೆಂಬ ಬುದ್ಧಿ); ನಿಜ (ತನ್ನಂತೆಯೆ) ಆತ್ಮಕ ಬುದ್ಧಿ; ದುರಿತ....—ಪಾಪದಿಂದುಂಟಾದ ಪರಿಹರಿಸಲಾರದ ದುಃಖ ಶೋಕಗಳಿಂದ ಪೀಡಿತರಾದವರಲ್ಲಿ ಪುತ್ರವಾತ್ಸಲ್ಯವು. ವಿಶ್ವಂ (ವಿಶ್ವವನ್ನು)+ಭರನು (ಪೋಷಿಸುವವನು) ವಿಷ್ಣುಭಕ್ತರಲ್ಲಿ. ಜಿಹ್ವ+ಇಂದ್ರಿಯದ...—ನಾಲಗೆಯ ಸಂಬಂಧವಾದ ರುಚಿಯ ಆಸೆಗೆ ಸಿಗದೆ. ಸೆಡೆದು—ದೂರ ಮಾಡಿ. ಮೆಲ್ಲಿತು +ಅಡಿ—ಮೆಲ್ಲಡಿ. ಜಡ—ಮಂದಸ್ವಭಾವದವ. ಸಹಜವೊ—ಸ್ವಾಭಾವಿಕವೊ? ಬಾಲ...—ಬಾಲಗ್ರಹದಿಂದ ಪೀಡಿಸಲ್ಪಟ್ಟವನೊ? ಚರಿತ್ರ—ನಡತೆ. ಭಕ್ತಿಯ ನಿಜವಂ—ನಿಜವಾದ ಭಕ್ತಿಯನ್ನು. ದುಃ+ಚರಿತ. ಬೆಚ್ಚನೆ+ಸುಯ್ದು. ತನು+ಮನ+ವಚನಂಗಳ+ಒಳಗೆ—ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ. ಹರಹಿಕೊಳು—ಹೊಗಳು.

95-96. ಶೈಶವದ.—(ಶಿಶುಭಾವವೇ ಶೈಶವ) ಚಿಕ್ಕಂದಿನಲ್ಲಿ ಕಲಿಸಿದ ಅಭ್ಯಾಸವು ಉಪಯೋಗಕ್ಕೆ ಬಂದರೆ. ಮತಿ+ಸಸಿನ+ಅಹುದು—ಬುದ್ಧಿ ಸರಿಯಾಗುವುದು. ಬಾಲಕರಂ—ನಾಲ್ವರೂ ಮಕ್ಕಳನ್ನು. ಭೃಗುಕುಲದ+ವಂಶದಲ್ಲಿ ಹುಟ್ಟಿದ. ಚಂಡಾಮರ್ಕ—ಶಂಡಾಮರ್ಕ ಎಂಬಿಬ್ಬರಲ್ಲಿಗೆ. ಬರೆ—ಗುರುಗಳ ಮನೆಯಿಂದ ಮರಳಲು.

ತಕ್ಕವಿಸಿ–ಅಪ್ಪಿಕೊಂಡು. ಅಶ್ರುಪೂರ–ಕಣ್ಣೀರ ಪ್ರವಾಹದಲ್ಲಿ. ಕರುಣಿಸು–ದಯೆಯಿಟ್ಟು ಹೇಳು. ವೇದಸಮ್ಮತವಾದ–ವೇದಗಳು ಒಪ್ಪುವ (ಹೇಳಿರುವ). ಆವುದು–ಯಾವ ವಿಷ್ಣುಭಕ್ತಿ ಇದೆಯೊ ಅದನ್ನು. ಅರಿತೊಡೆ–ತಿಳಿದರೆ. ನವವಿಧ ಭಕ್ತಿಗಳು (ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ.) 8ನೆಯ ಪದ್ಯದಲ್ಲಿ ವಿವೃತವಾಗಿವೆ.

96-97. ಸರ್ವ (ಕಡೆಯಲ್ಲಿಯೂ)ಗತನು–ಇರುವವನು. ಅಸುರ ಸಂಬಂಧವಾದುದು ಆಸುರಕರ್ಮ. ಆಲಿಗಳು–ಕಣ್ಣುಗಳು. ರೌದ್ರರೋಷ....–ಭಯಂಕರವಾದ ಕೋಪವನ್ನು ಆವೇಶಗೊಂಡವನಾಗಿ. (ತಮ್ಮನಾದ ಹಿರಣ್ಯಾಕ್ಷನನ್ನು ಕೊಂದುದಕ್ಕಾಗಿ ವಿಷ್ಣುವಿನ ಮೇಲೆ ದ್ವೇಷವುಂಟಾಗಿ.) ಭಾಗ್ಯವ...–ತಾನಾಗಿ ಮನೆಗೆ ಬಂದಿರುವ ಸಂಪತ್ತನ್ನು ಹೊಡೆದು ನೂಕುವ ಹಾಗೆ. (ಪ್ರಹ್ಲಾದನೆಂಬ ಹರಿಭಕ್ತನೇ ಅವನ ಭಾಗ್ಯಸಂದರ್ಭ.) (ಚಿಕ್ಕ) ತಂದೆಯು ಕೊಂದವನಿಗೆ. ಲೆಂಕ–ಸೇವಕ. ಎದೆಯು, ಕೊಳ್ಳನು–ಕೊಡುವನು, ಮನಸ್ಸನ್ನು ಒಪ್ಪಿಸಿರುವನು. ಗಜರು–ಗರ್ಜಿಸು. ಜಗತ್‌ಮಯನು ಎನಿಪ–ಪ್ರಪಂಚದಲ್ಲೆಲ್ಲ ತುಂಬಿರುವನಾದ. ಸೆರೆ ಹಿಡಿದು–ಸೆರೆ ಹಿಡಿದಂತೆ ಭದ್ರವಾಗಿ ಮನಸ್ಸಿನಲ್ಲಿಟ್ಟುಕೊಂಡು ಮೇಳವಿಸು–ಸೇವಿಸು. ಏಕಾತ್ಮಭಾವ–ಎಲ್ಲರಲ್ಲೂ ಒಂದೇ ಆತ್ಮವಿರುವುದೆಂಬ ಭಾವನೆಯಿಂದ. ವೈಷ್ಣವ–ವಿಷ್ಣುಭಕ್ತ. ಇರಿ–ಚುಚ್ಚು. ಕೈದು–ಆಯುಧ.

97-98. (ತನ್ನನ್ನು ಕೊಲ್ಲುವ) ಕಾರಣವಾಗಿ ಹುಟ್ಟಿದ ಮೃತ್ಯು. ಶಸ್ತ್ರ–ಕತ್ತಿ ಮೊದಲಾದುವು. ಅಸ್ತ್ರ–ಬಾಣಗಳು. ನಿಕರದ ಭಂಗ–ಇವುಗಳ ಮುರಿಯುವಿಕೆ. ಕಮಲಜ–ಬ್ರಹ್ಮ. ದಿಕ್ಕರಿ–ದಿಗ್ಗಜಗಳು, ದಿಕ್ಕುಗಳಲ್ಲಿ ನೆಲಹೊತ್ತಿರುವ ಆನೆಗಳನ್ನು ಕವಿಸು–ನುಗ್ಗಿಸು. (ಹಿರಣ್ಯಕಶಿಪುವು ದೇವತೆಗಳಿಂದಲೂ, ಮನುಷ್ಯರಿಂದಲೂ, ಪಶುಪ್ರಾಣಿಗಳಿಂದಲೂ, ಆಯುಧಗಳಿಂದಲೂ, ಹಗಲು ರಾತ್ರಿಗಳಲ್ಲಿಯೂ, ಭೂಮ್ಯಾಕಾಶಗಳಲ್ಲಿಯೂ ಮರಣ ಹೊಂದದಂತೆ ಬ್ರಹ್ಮನು ವರಕೊಟ್ಟಿದ್ದನು.) ಮತ್ತ–ಮದವೇರಿದ. ನೂಂಕು–ನುಗ್ಗು. ಧರಣಿಯ–ಭೂಮಿಯನ್ನೆತ್ತಿ ಬಿಸಾಡುವಷ್ಟು ಪೇಚಾಡುವಂತೆ ಭಾರವಾಗಿ ಅವನಿದ್ದನು. ಸುಂಡಿಲು (ತ್ಸ–ಶುಂಡಾ) ಮೌಳಿಮಾಣಿಕ–ಶಿರೋಮಣಿ (ಅರಿಸಮಾಸ). ಮುಕ್ತಿ....–ಮೋಕ್ಷದ ದಾರಿಯನ್ನು ಕೊಳ್ಳೆಹೊಡೆದುವು, ಸತ್ತವು. ವಿಷ್ಣುಭಕ್ತನನ್ನು ಮುಟ್ಟಿದುದರಿಂದ ಮೋಕ್ಷವು! ಕೈ+ಬೀಸು–ಕೈಸನ್ನೆಮಾಡು. ಮೊತ್ತ–ಗುಂಪು. ಉರಗ+ಇಂದ್ರ (ಗುಣ. ಸಂ.) ದೊಡ್ಡ ಹಾವು. ಅಘ....–ಪಾಪಗಳ ಕುಲಕ್ಕೆ ಮೃತ್ಯುವಾದ ಪ್ರಹ್ಲಾದ. ಮರ್ಮ–ಪ್ರಾಣಸ್ಥಾನ. ದಾಡೆ (ತ್ಸ. ದಂಷ್ಟ್ರಾ) ಭೋಗಿ (ಹೆಡೆಯುಳ್ಳುದು). ಭೂಷಣ (ಆಭರಣವುಳ್ಳವನು) ಶಿವ. ಇದಿರುಗೊಳ್ಳದು–ನಾಟದು. ಏಗುವೆನು–ಏನು ಮಾಡುವೆನು. ಚವಳ–ಮೂರ್ಖ. ಹವ್ಯವಾಹನ–ಅಗ್ನಿ. ಜ್ವಾಳವಿಸು–ಬಲವಾಗಿ ಉರಿಸು. ಈಡಾಡು–ಬಿಸಾಡು.

98-99. ಕೈವಾರಿಗನು–ಸೇವಕನು. ನುಚ್ಚುವಾಣು–ಸಾಕುಮಾಡು. ಬಸಿರಿನ ಕಿಚ್ಚು–ಹಸಿವು. ನಿಚ್ಚ (ನಿತ್ಯ) ಕಿನಸರಿ–ಎಂದಿನಂತೆ. ಬಚ್ಚಿ–ಬತ್ತಿ. ಹುಡುಕಿ ನೀರು–ಆಳವಾದ ನೀರು. ಅಪಗಡಿಸು—ಪೀಡಿಸು. ಮಹಾಶೈಲ–ದೊಡ್ಡ ಬೆಟ್ಟ. ಅಗ್ರ–ತುದಿ. ಬಿಗೆ ...–ಹೊಟ್ಟೆಯೊಡೆವಂತೆ ಬಳೆದು. ಉಬ್ಬಸಗೊಳಿಸು–ಉಸಿರು ಕಟ್ಟಿಸು. ಯಾತನೆ–ಪೀಡೆ. ಮೊಳೆ–ಚಿಕ್ಕಂದು. ಬಲುಹು–ಶಕ್ತಿ. ಚಲ–ಹಟ. ಖತಿ–ಕೋಪ. ಆಕೆವಾಳ–ಸಮರ್ಥ. ಅದ್ದು–ಮುಣುಗಿಸು. ಮುಗ್ಧ–ಮೂಢ.

99. ಜೀವನಿಕಾಯ—ಪ್ರಾಣಿಕೋಟಿಯನ್ನು. ಧರಿಸು—ಕಾಪಾಡು. (ಸಾಯಲು)+ಈಸದರು–ಬಿಡದವರು. ರಾಯ–ಪ್ರಕಾಶವುಳ್ಳ, ಪೂಜ್ಯ. ಮೂ+ಜಗ (ದ್ವಿಗು) ಮಾಯಾ ವಿಷ್ಣು–ವಂಚಕನಾದ ವಿಷ್ಣು. ನಗೆಯ ಮಾಡಿದೆ–ನಗುವಂತೆ ಮಾಡಿದೆ. ತಿಂದು(ಬೇಡಿ ತಿಂದು)ಉಣ್ಣ(ಲು)ಬಯಸಿ(ಇಚ್ಛಿಸಿ). ಒಗಡಿಸುವೆ—ಅಸಹ್ಯಪಡುವೆ. ಚಕ್ರ–ವಿಸ್ತಾರವಾದ ದೇಶ+ವರ್ತಿ–ಆಳುವನ. ಇಕ್ಕೆಹಕ್ಕೆ ಅದು ಅವನ ಉದರದೊಳ್–ಅವು ಯಾರ ಹೊಟ್ಟೆಯಲ್ಲಿ ಅನುಕೂಲವಾಗಿ ಸೇರಿರುವುವೊ ಅಂತಹ. ಒರ್+ಕುಡಿತೆ–ಅತಿ ಸ್ವಲ್ಪ. ಸಂಪನ್ನನು–ತೃಪ್ತನು. [ಉಪಮೆ] ಕನಸಿನ..–ಸ್ವಪ್ನದಲ್ಲಿ ಬೆಳೆದು ಹಣ್ಣಾದಂತೆ ಕಂಡ ಕೆಯ್ಯನ್ನು ನಂಬಿ. ಕಳವೆ(ಮಾ)ಅಕ್ಕಿ–ಸಣ್ಣಕ್ಕಿ. ಒಗು–ಚೆಲ್ಲು. (ಲಲಿತಾಲಂಕಾರ). ಅದರಂತೆ, ಲೋಕದಲ್ಲಿ ಸ್ಥಿರವಲ್ಲದ ಸುಖವನ್ನು ಮೆಚ್ಚಿ, ಶಾಶ್ವತವಾಗಿ ಸುಖವನ್ನು ಕೊಡುವ ವಿಷ್ಣುವನ್ನು ಅಲಕ್ಷ್ಯಮಾಡದಿರು. ವೃಥಾ–ವ್ಯರ್ಥವಾಗಿ. ಮನೋರಥ....–ಪ್ರಪಂಚದ ಅಶಾಶ್ವತವಾದ ಸುಖದ ಇಚ್ಛೆಯೆಂಬ ಹೊಳೆಯಲ್ಲಿ. ಅದ್ದದಿರು–ಮುಣುಗಿಸದಿರು, ಅದನ್ನಾಶಿಸಲು ಕಲಿಸಬೇಡ. ಯಾವುದೊಂದು ದೇವಾಲಯದ ಅಥವಾ ದೇವತೆಯ ಹೆಸರಲ್ಲಿ ದನ ಎತ್ತು ಮೊದಲಾದುವನ್ನು ಬಿಡುವುದಕ್ಕೆ 'ಸುಳಿದುಬಿಡು' ಎನ್ನುವರು; ಅಥವಾ ತಲೆಯ ಸುತ್ತಲೂ ತಿರುಗಿಸಿ ದೈವಭೂತಗಳಿಗೆ ಆಡು, ಕುರಿ, ಕೋಳಿಗಳನ್ನು 'ಸುಳಿದು' ಬಲಿ ಕೊಡುವರು.

100. ಕುಂತ–ಈಟಿ. ಗಡ–ಅಂತೆ. ಅಂತಿಕದಲಿ–ಸಮೀಪದಲ್ಲಿ. (ಸಾವು ಹತ್ತಿರವಿರುವವರಿಗೆ) ವೆಗ್ಗಳಗಳಹುತನ–ಬಗುಳಾಟವು ಹೆಚ್ಚು. ಮಂದಭಾಗ್ಯನೆ (ಬಹುವ್ರೀಹಿ)—ಭಾಗ್ಯಹೀನನೆ. ಎನ್ನಿಂದ....—ನನಗಿಂತ ಇನ್ನೊಬ್ಬ ಈಶ್ವರನು ಇದ್ದಾನೆಯೆ? ಹಂದಿ–ವರಾಹಾವತಾರ. ಕಣ್ಣು+ತೆರೆಯಲ್. ಹರಿಯು ನನಗೆ ಸರಿಯೆಂದು ಬಗುಳದಿರು, ಅವನ ಪರಾಕ್ರಮದ ಯೋಗ್ಯತೆ ತಿಳಿಯಬಹುದು. ನೆರವಣಿಗೆ–ಸೇರಿಕೆ. ತೃಣಮೊದಲು–ಹುಲ್ಲು ಮೊದಲಾಗಿ ತೊಡಗಿ. ಚತುರ್+ಆಸ್ಯ—ನಾಲ್ಮೊಗವುಳ್ಳ ಬ್ರಹ್ಮನೇ ಕೊನೆಯಾಗುಳ್ಳ. ಗಣನೆ ಕೆಟ್ಟ–ಲೆಕ್ಕವಿಲ್ಲದ. ಚರ+ಅಚರ–ಜಂಗಮ ಸ್ಥಾವರಗಳು. (ದ್ವಂದ್ವ) ಅಣಕ–ಪ್ರೇಮ. ಅಣುಮಹತ್ತು–ಸಣ್ಣ ಮತ್ತು ದೊಡ್ಡ, ಸ್ಥೂಲಸೂಕ್ಷ್ಮ ವಸ್ತುಗಳಲ್ಲಿ. ಚೇತನ–ಶಕ್ತಿ, ಜೀವ. ಅಕ್ಷಿಗೋಚರಕೆ–ಕಣ್ಣಿಗೆ. ಸಾಕ್ಷಾತು–ಪ್ರತ್ಯಕ್ಷ.

101. ಜಾತಕದ ಫಲ ತೀರಿತು–ಜಾತಕದಲ್ಲಿ ಹೇಳುವ ಫಲ ಇಲ್ಲಿಗೆ ತೀರಿತು, ಸಾಯುವಿ. ನಿಗಮ ಮೂರುತಿ–ವೇದ ಸ್ವರೂಪನೆ. ನಿಗಮ ದೂರನೆ–ನಿನ್ನಿಂದಲೆ ಉಂಟಾದ ವೇದಗಳಿಗೂ ಅಗೋಚರನಾಗಿರುವವನೆ. ನಿರ್ಲೇಪನೆ–ದುಃಖ ಮೊದಲಾದುವುಗಳ ಸಂಬಂಧವಿಲ್ಲದವನೆ. ಖ (ಆಕಾಶದಲ್ಲಿ)+ಗ (ಚಲಿಸುವ) ಗರುಡನ ಮೇಲೆ. ಗಮನ–ಸಂಚರಿಸುವವನೆ. ಕಮನೀಯ–ಸುಂದರ. ಕಂಜದಳನಯನ–ನೀರಲ್ಲಿ ಹುಟ್ಟಿದ ತಾವರೆ ಎಸಳಂತೆ ಕಣ್ಣುಳ್ಳವನೆ ಅಗಜೆ–ಗಿರಿಜೆ+ಅರಸ–ಪ್ರಿಯನೆ, ಶಿವ. ಅಘಹರ–ಪಾಪ ಪರಿಹಾರಕನೆ. ಒರಲು–ಮೊರೆಯಿಡು. ಅಡಾಯುಧ–ಕತ್ತಿ. ಅಸಿ ಪಿಡಿದು (ಕ್ರಿಯಾಸ.) ನರ+ಕುರಿಯೆ (ಮನುಷ್ಯ ರೂಪದ ಹೇಡಿ ಕುರಿಯಂತಿರುವವನೆ.) ಕೈ+ಒಡನೆ–ಕೂಡಲೆ. ಕೊನರುವ–ಚಿಗುರು ಬಿಡುವ, ಬಹು ಹೊತ್ತಿನ ವರೆಗೆ ಧ್ವನಿಗೊಡುವ. ಬರಸಿಡಿಲು–ಕಠಿನ ಸಿಡಿಲು. ಕಲ್ಪ+ಅಂತಕಾಲದಲಿ–ಪ್ರಳಯದಲ್ಲಿ.

102. ಸಂವಿತ್+ರೂಪ–ಆತ್ಮಸ್ವರೂಪ. ಮನ+ತಂದ–ಮನಸ್ಸು ಮಾಡಿದನು. ಅಗ್ರಸ್ತಂಭದಲ್ಲಿ–ಸ್ತಂಭಾಗ್ರದಲ್ಲಿ (ಅಂಶಿಸಮಾಸ.) ದೀಪ್ತಿ–ಪ್ರಕಾಶ. ಕಣ್+ಅಲಿ–ಕಣ್ಣುಗೊಂಬೆ. ಕೋರವಿಸೆ–ಮುಚ್ಚಲು. ನಿನಾದ–ಶಬ್ದವು. ಎಡೆಬಿಡದೆ ಕೇಳಿಸಲು. ಬಿಗಿದ (ಗಂಟುಳ್ಳ)+ಹುಬ್ಬು. ತೀಕ್ಷ್ಣ–ಕೆಂಪಾದ ತುಡುಕು–ಮುಚ್ಚು. ಬಾಯ್ದೆರೆಯ ತುಟಿಯ–ಬಾಯಿಗೆ ತೆರೆಯಂತಾದ ತುಟಿಯು. ನೆಗೆದ–ನಿಂತಿರುವ. ಕೊಡಕೆ–ಕಿವಿ. ಬಡನಡು–ತೆಳುವಾದ ಸೊಂಟ. ಉರು(ದೊಡ್ಡ)ಜಘನ–ತೊಡೆ, ಸೊಂಟದ ಮುಂಭಾಗ. ವೃಕ್ಷಸ್ಥಳ–ಎದೆ. ಬೆಟ್ಟದ ಹುಲಿ–(ಅಲುಕ್ಸಮಾಸ.) ಎಸಗು–ತೊಡಗು. ಹಲಗೆ (ತ್ಸ–ಫಲಕ) ಗುರಾಣಿ. ಸಿಂಹನಾದ–ವೀರಾವೇಶದಿಂದ ಉಂಟಾದ ಗರ್ಜನೆ.

102-103. ಕಡುಗಿ–ಕೋಪಿಸಿ. ಹಳಚು–ಯುದ್ಧಮಾಡು. ಬಳಿಕ+ಅದು. ಅರುಣಜಲ–ರಕ್ತ. ಬಾನ್+ತಳಕೆ–ಆಕಾಶಕ್ಕೆ. ಒಗೆದು ಹಾರಿ. ಉಗಲು–ಚಿಮ್ಮಲು. ಬವರಿಸು–ಜಗಳಾಡು. ಜಗಜಟ್ಟಿ ಭಟ–ಬಹು ಸಮರ್ಥನಾದ ಹಿರಣ್ಯಕಶಿಪು. ಒಳಹೊಕ್ಕು ಹೋರು–ಕವಿದು ಯುದ್ಧಮಾಡು. ಬಿರಿ–ಒಡೆ. ಅಸುರ (ರಾಕ್ಷಸ) ವನಿತಾ–(ಸ್ತ್ರೀಯರ) ಗರ್ಭವು. ಭೂಮಿಗೆ ಇಳಿವ ಹಾಗೆ. ಅಟ್ಟಹಾಸ ಮಾಡು–ಗಟ್ಟಿಯಾಗಿ ನಗು. ಧೃತಿ–ಧೈರ್ಯ. ಆಹವ–ಯುದ್ಧ. ಕಡಿ–ತೊಲಗಿಸು. ರಿಪು (ಶತ್ರು)+ಭಂಜನ–ನಾಶ ಮಾಡುವವ. ಕಂಜ (ತಾವರೆ)+ನಾಭ–ಹೊಕ್ಕುಳುಳ್ಳವ (ಬಹುವ್ರೀಹಿ)–ನರಸಿಂಹನು. ತಿರುಹಿ–ಮೊಗಚಿ. ಕುಂಜರ–ದಂತವುಳ್ಳ ಆನೆ. ಬಗಿವಂತೆ–ಬಗಿದು) ಕುಲಿಶ–ವಜ್ರ. ಕರುಳ ಮಾಲೆ (ಅಲುಕ್ಸಮಾಸ.) ಜಗತ್+ಆಧಾರ (ಜಶ್ತ್ವ ಸಂಧಿ.. ನೆರೆಯದ–ಸಮಾಧಾನವಾಗದ. ಪತಿಕರಿಸಿ–ಸ್ವೀಕರಿಸಿ. ನಿತ್ಯಾತ್ಮ–ಕವಿಯ ಬಿರುದು. ಕಂಠದಲ್ಲಿ ಧ್ವನಿಯುಳ್ಳುದು ಕಂಠೀರವ.

## ಜೈಮಿನಿ ಭಾರತದೊಳಗಣ ಪದ್ಯಗಳು.

103-104. **ಚಂದ್ರಹಾಸನ ಬಾಲ್ಯ:**—'ಇನ್ನು ಹೇಳುವೆನು' ಎಂದು ನಾರದರು ಅರ್ಜುನನಿಗೆ ಹೇಳುವುದು. ಕೇರಳ—ಮಲೆಯಾಳ. ಸತ್+ನುತಗುಣ+ಉದಯಂ—ಸತ್ಪುರುಷರಿಂದ ಹೊಗಳಲ್ಪಟ್ಟ ಒಳ್ಳೆಯ ಗುಣಗಳಿಂದ ಕೂಡಿದವನು. ಆರು—ಆರು. ದಿವ—ಹಗಲು. (ಶಾಸ್ತ್ರ ವಚನದಂತೆ ಮೂಲ ನಕ್ಷತ್ರದ ಮೊದಲನೆ ಪಾದವು ಹೆತ್ತವರಿಗೆ ಕೆಡಕನ್ನುಂಟು ಮಾಡುವದಾದ ಕಾರಣ, ಅಂಥ ಮಗುವನ್ನು ಏಳು ವರ್ಷ ವಯಸ್ಸಾಗುವ ತನಕ ಹೆತ್ತವರು ನೋಡ ಕೂಡದೆಂದಿದೆ.) ಪುತ್ರ+ಉತ್ಸವ—ಜಾತಕರ್ಮ. ಪೊಯ್ಸ್ಪು—ಯುದ್ಧದಲ್ಲಿ ಕಾದು. ಚಿತ್ರಭಾನು—ಅಗ್ನಿ. ಶತ+ಪತ್ರ—ಕಮಲ. ಧಾತ್ರಿ—ದಾದಿ. ಅರ್ಭಕ—ಮಗು. ಪೊಳಲ—ಪಟ್ಟಣ. ತಿರಿದು=ಬೇಡಿ. ಹೊರೆದು—ಸಾಕಿ. ಪಸುಳೆ—ಶಿಶು. ಕೈಕಾಲುಗಳಿಂದ ತೋರಿಸುವ ಚೇಷ್ಟೆಯ ಅಭಿನಯ. ಆರ್ತೆ—ದುಃಖಿತೆ. ಪೊನ್ನಿನ+ತೊಡಿಗೆ-ಚಿನ್ನಾಭರಣ (ಸಮಯ) ಬಿಡದೆ+ಎರೆಯೆ—ಮಿಾಯಿಸಲು. ಕುಡಿ (ಯಲಿಕ್ಕೆ ಬೇಕಾದ)+ಪಾಲು.

104-105. ಲೀಲೆ—ಆಟ. ಲಾಲನೆ—ಸಂರಕ್ಷಣೆ, ನಡೆವುದಕ್ಕೂ ನುಡಿವುದಕ್ಕೂ ಕಲಿಯುವ ತನಕ. ವಿಧಿವಶ—ದೈವಗತಿ. ರುಜೆ—ರೋಗ. ಅಡಸಿ—ವ್ಯಾಪಿಸಿ. ಕಾಲ....—ಸತ್ತಳು. ನಿರ್+ಆಲಂಬಂ(ಆಶ್ರಯ)+ಆಗಲು. ಎಲ್ಲರ್ಗೆ. (ಷಷ್ಠಿ ಅರ್ಥದ ಚತುರ್ಥಿ) ಈಡಾದನು—ಪಾತ್ರನಾದನು. ದೇಸಿಗ—ಬಡವ. ತನಿ (ಸವಿ)+ಪಣ್ಣು (ಹಣ್ಣು) ಸಕ್ಕರೆ (ತ್ಸ—ಶರ್ಕರಾ) ಸೊಲ್ಪ—ಆಡುವ. ಮುದ್ದುಗೈ—ಮುದ್ದಾಡು. ಶಿಶುವು, ಒಲ್(ಒಪ್ಪುವ) ಉದಕ—ನೀರು. ಮಜ್ಜನ (ತ್ಸ—ಮಾರ್ಜನ) ಮಿಾಯುವುದು. ಮೆಲ್ಲಿತು+ಪಾಸು—ಮೃದುಹಾಸುಗೆ. ಅಳ್ತಿ—ಪ್ರೇಮ. ಒಸೆದು—ಹಿಗ್ಗಿ. ಎಳೆತಾದ+ಮಕ್ಕಳ್. ಮುದ್ದು...—ಹೆಚ್ಚಿನ ಪ್ರೇಮ ಹುಟ್ಟಿಸುತ. ಸಾಧನೆ—ಅಂಗಸಾಧನೆ. ನೆರವಿ—ಸಮೂಹ. ರೂಢಿಸಿದ—ಪ್ರಸಿದ್ಧ. ಪರಪುಟ್ಟ (ತ್ಸ—ಪರಪುಷ್ಟ) ಇತರರಿಂದ ಪೋಷಿಸಲ್ಪಟ್ಟವನಾದ. ಕ್ರೀಡಿಸು—ಆಡು. ಪ್ರಬಲದಿಂ ಪ್ರವರ್ತಿಪ—ರಾಜ್ಯಭಾರದಲ್ಲಿ ಹೆಚ್ಚಿನ ಸ್ವಾತಂತ್ರ್ಯವುಳ್ಳ. ವಿಪ್ರರನ್ನು (ಭೋಜನ) ಸಂತರ್ಪಣಗಳಿಂದ ತೃಪ್ತಿಪಡಿಸಲು. ಸತ್ಕೃತರ್-ವೀಳ್ಯದಕ್ಷಿಣೆ ಮೊದಲಾದ ಉಪಚಾರ ಹೊಂದಿದವರು.

105-106. ಉತ್+ಲಾಸ. ಸತ್+ಲಲಿತ—ಅಂದವಾದ. ಅನುರಾಗ—ಪ್ರೀತಿಯಿಂದಾದ ಸಂತೋಷ. ರಾಜಕಾರ್ಯ....—ರಾಜಕಾರ್ಯದಲ್ಲಿ ಮಗ್ನರಾಗಿರುವ ನಮಗೆ ಈ ವಿಚಾರದಿಂದ ಪ್ರಯೋಜನವೇನು? ಪಾರ್ವ—ಬ್ರಾಹ್ಮಣ. ಚಾರು—ಉತ್ತಮ. ಪೊಡವಿ (ತ್ಸ—ಪೃಥ್ವಿ)-ಕ್ರೂರವಾದ ಮೊಸಳೆಗಳ ಹಿಂಡಿನಿಂದ ತುಂಬಿದ್ದ (ಪಿರಿದು+ಮಡು) ದೊಡ್ಡ ನೀರ್ಗುಂಡಿ. ಆಳದಲ್ಲಿ ಮೊಸಳೆಗಳಿದ್ದರೂ ಮೇಲೆ ನಿರ್ಮಲವಾದ ನೀರಂತೆ. ಭಾವ—ಸ್ವಭಾವ. ಬಹಿರ್+ಅಂಗ—ಹೊರಗೆ. ಧರೆಯ ಬೃಂದಾರಕ—

ಭೂಸುರ, ಬ್ರಾಹ್ಮಣ. (ಉಪಮಾ)ಏಕಾಧಿಪತ್ಯ-ಸ್ವಾತಂತ್ರ್ಯ. ಗಡ–ಅಂತೆ! ಬೇಕಾದ–ಅಧಿಕವಾಗಿ ದೊರೆವ. ಸಂಪದ–ಐಶ್ವರ್ಯ. ಬಯಲ್–ವಾಯು. ಕುತ್ಸಿತ+ಮತಿ–ದುಷ್ಟಬುದ್ಧಿ. ಭಯವನ್ನು ಹುಟ್ಟಿಸುವಂಥ ಆಕಾರವುಳ್ಳ ದೇಹಧಾರಿಗಳಾದ ಚಂಡ+ಅಲರ–ಕೋಪವುಳ್ಳವರ, ಹೊಲೆಯರನ್ನು.

105-107. ಕಾನನ (ಕಾಡು)+ಅಂತರ (ಒಳಗೆ). ಕುರುಪ–ಗುರುತನ್ನು. ಭಯಾನಕದಲಿ- ಬೆದರಿಸಿ. ದಾನವ+ಈಶ್ವರ–ಹಿರಣ್ಯಕಶಿಪುವೆಂಬ ದೈತ್ಯರಾಜ. ನಲುಗಿ–ಕ್ಷೀಣವಾಗಿ. ಶೀತಲ....–ಚಂದ್ರನ ಸಂಬಂಧವಾದ ಗುರುತಿನಂತೆ. (ಉಪಮಾ) ಕಾನ್ಯಕುಬ್ಜದಲ್ಲಿ ಅಜಾಮಿಳನೆಂಬೊಬ್ಬ ಬ್ರಾಹ್ಮಣನು ಶೂದ್ರ ಸ್ತ್ರೀಯನ್ನು ವಿವಾಹಮಾಡಿಕೊಂಡನು. ಅವನಿಗೆ ಹತ್ತು ಮಕ್ಕಳಿದ್ದುವು. ಕಿರಿಯ ಮಗ ನಾರಾಯಣ. ಬ್ರಾಹ್ಮಣನ ಅವಸಾನ ಕಾಲದಲ್ಲಿ ಯಮದೂತರು ಅವನನ್ನು ಬಂಧಿಸ ಬರಲು, ಅವರನ್ನು ತನ್ನ ಮಗ ನೋಡಿ ಎಷ್ಟು ಬೆದರುವನೊ ಎಂದು ಅವನನ್ನು ಎಚ್ಚರಿಸಲು, 'ನಾರಾಯಣ' ಎಂದು ಕರೆದನು. ಕೂಡಲೆ ವಿಷ್ಣುದೂತರು ಬಂದು ಯಮದೂತರಿಂದ ಅವನನ್ನು ಬಿಡಿಸಿದರೆಂದೂ, ಅವನು ಧರ್ಮಾತ್ಮನಾಗಿ ಗಂಗಾ ತೀರದಲ್ಲಿ ಸತ್ತು ಸ್ವರ್ಗಕ್ಕೆ ಹೋದನೆಂದೂ ಕಥೆಯಿದೆ. ಪೆಗಲ್–ಹೆಗಲು. ಉಪಲ–ಕಲ್ಲು. ಬಗೆದೋರಲು–ಮನಸ್ಸಿಗೆ ಸೂಚಿಸಲು. ಕಟುಕರ–ಚಂಡಾಲರ ಮನಸ್ಸು ಕರಗಿತು. ಏಳ್ಗೆ–ಅತಿಶಯ, ಮಹಿಮೆ. ದಾತಾರ–ಒಡೆಯನಾದ ದುಷ್ಟಬುದ್ಧಿ.



107-108. ಬಾಷ್ಪ–ಕಣ್ಣೀರು. ಆರ್ತ–ದುಃಖಿತ. (ಪಶು ಪಕ್ಷಿಗಳೂ ಆರ್ತರಾಗಿ ದುಃಖಪಟ್ಟ ಬಳಿಕ, ಅಂತವರಿಗಾಗಿ ದುಃಖಪಡದ ಮನುಷ್ಯನು ಪಾಪಿಯಲ್ಲವೆ?) ದಿನಪ–ಸೂರ್ಯ. ನೆಲೆ+ಕೆಟ್ಟು–ಇರಲಾರದೆ. ವನವಾಸ....–ಕಾಡಿನಲ್ಲಿದ್ದು ಉತ್ತಮವಾದ ತಪಸ್ಸಿನ ಫಲವನ್ನು ಸಂಪಾದಿಸಿಕೊಂಡು, ತನಗೆ ಹಗೆಯಾದ ಹಗಲನ್ನು ಹೋಗಲಾಡಿಸುವ ಕತ್ತಲಂತೆ;(ಬೇಡರು ಬೆಳಕನ್ನು ಹೋಗಲಾಡಿಸುವಷ್ಟು ಕಪ್ಪಗೆ ಇದ್ದರೆಂದು ತಾತ್ಪರ್ಯ.) (ಒಂದು ಕಾರಣದಿಂದ ಒಂದನ್ನು ಇನ್ನೊಂದಾಗಿರಬಹುದೆಂದು ಊಹಿಸುವುದು ಉತ್ಪ್ರೇಕ್ಷಾಲಂಕಾರ.) ಕರಿದು+ಒಡಲು. ಎಳಸಿದ–ಇಚ್ಛಿಸಿದ. ದೂತಸಂಘಾತದಂತೆ, ಏಕೆ? (ಉಪಮೆ) ಚಮರಿ–ಚೌರೀ ಮೃಗ. ಕ್ರೌಂಚ–ಜಲಪಕ್ಷಿ. ಶಿಖಿ–(ಜುಟ್ಟುಳ್ಳ)ನವಿಲು. ತಿತ್ತಿರಿ–ಉದ್ದ ಬಾಲದ ವೇದಪಕ್ಷಿ. ಎರಳೆ–ಜಿಂಕೆ. ಚಾಪಲ–ವೇಗವುಳ್ಳ. ಬಳಿಸಂದನು-ಹಿಂಬಾಲಿಸಿದನು. ನಿಯೋಗದಂತೆ–ಅಪ್ಪಣೆಯನುಸರಿಸಿ. ಆ ಕಾಡುಳ್ಳ ನಾಡಿನ (ವಳಿತ) ಅಧಿಕಾರವನ್ನು ಮೃಗಯಾ ಕಾಮನಾಗಿ–ಬೇಟೆಯಲ್ಲಿ ಮನಸ್ಸು ನೆಟ್ಟವನಾಗಿ. ಸಿಡಿದು–ತಪ್ಪಿಸಿ ಓಡುವ. ಕುರಂಗ–ಜಿಂಕೆ. ತೇಜಿ–ಕುದುರೆ. ಜವ–ವೇಗವು ಗಾಳಿಗೂ ಮೀರಿತು. (ಅಸಾಧ್ಯವಾದುದನ್ನು ಹೇಳುವ ಅತಿಶಯೋಕ್ತಿ.)

108-109. ಬೆನ್+ಪತ್ತಿ–ಹಿಂದಟ್ಟಿ. ಹರಿ–ಕುದುರೆ, ವಿಷ್ಣು, ವೇಗವಾಗಿ ಬರುವುದು. ಪಾಪ....–ಪಾಪವು ಅತಿಶಯವಾದ ಪುಣ್ಯವನ್ನುಂಟುಮಾಡಿತು. ಸುವಿಹರಿಸು–

ಸವಿಸ್ತಾರವಾಗಿ ಹೇಳು. ಲಹರಿ–ತೆರೆ. ಓಲಾಡು–ತೇಲಾಡು. ಕಡವರ (ತ್ಸ–ಕಾರ್ತಸ್ವರ) ಭಂಗಾರ. ಎಡಹಿ–ಸಂಧಿಸಿದ–ಕಾಲಿಗೆ ತಾಗಿ ದೊರೆತ. (ಉಪಮೆ)(ಬೇರೆ ಬೇರೆ ಅರ್ಥದಲ್ಲಿ ಒಂದೇ ಪದವನ್ನುಪಯೋಗಿಸುವುದು ಯಮಕ; ಅದೂ ಪಾದದ ಆದಿ ಮಧ್ಯಾಂತಗಳಲ್ಲಿ ಕ್ಲೃಪ್ತವಾಗಿ ಬರುವುದು.) ಮೃಗಯೆ–ಬೇಟೆ. ಕೃಷ್ಣಮೃಗ–1. ಜಿಂಕೆ–2. ಕೃಷ್ಣನನ್ನು ಹುಡುಕುವ ಸ್ವಭಾವವುಳ್ಳ ಸಾಧು ಬಾಲಕ. ಪಚ್ಚಿಸಿ–ಹಂಚಿ. ಮೃಗಜೀವಿ–ಬೇಡ. ಮೃಗಧರ–ಚಂದ್ರ. (ಯಮಕ) ಮಣಿದೀಪ–ರತ್ನವನ್ನೆ ದೀವಿಗೆಗೆ ಬದಲಾಗಿಡುವುದು. ಬಿತ್ತರ(ತ್ಸ–ವಿಸ್ತಾರ) ನೆಗಳ್ದಂತೆ–ಸೇರಿದಂತೆ. ಉತ್ತರ+ಉತ್ತರ–ಸಮೃದ್ಧಿ. ಸುರಪುರ–1 ದೇವಪುರ, 2 ದೇವನೂರು. (ಕವಿಯು ಹುಟ್ಟಿದ ಊರು) ಲಕ್ಷ್ಮೀಶ–1 ನಾರಾಯಣ–2 ಕವಿಯ ಹೆಸರಿನ ಮುದ್ರೆ; (ಮುದ್ರಾಲಂಕಾರ).

109-111. **ಸೋಮೇಶ್ವರ ಶತಕ:**–1. ಸುಜ್ಞಾನದಿಂ–ತನ್ನಲ್ಲಿಯ ವಿಚಾರದಿಂದ. ಪಲವುಂ–ಹಲವು ಹಳ್ಳಗಳು ಸೇರಿ ಸಮುದ್ರದಂತೆ ದೊಡ್ಡ ಜಲಾಶಯವಾಗುವುದು.(ದೃಷ್ಟಾಂತ), ಇರಿ–ತಿವಿ, ಹೊಡೆ. ಆರ್+ಎಂದೊಡಂ–ಯಾರೆಷ್ಟು ದೂರಿದರೂ. ವಿಭು–ಅರಸು. ಷಟ್(ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬಾರು) ವರ್ಗ–ಗುಂಪು. ತೆರ ಬಲ್ಲರ್–ಕೊಡಲು ಶಕ್ತರು. ಪೊಣೆ–ಜಾಮೀನು, ಹೊಣೆ. 3. (ಕುಲಶೀಲಗಳಲ್ಲಿ) ಉತ್ತಮಗೆ. ಸತ್+ಪಾತ್ರ–ಉತ್ತಮ ಯೋಗ್ಯತೆಯುಳ್ಳವ. ಧನಲೋಭ, ದ್ರವ್ಯಾಶೆ. ಗೋಷ್ಠಿ–ಮಾತು, ವ್ಯವಹಾರ. ಭಕ್ತಿರಸ–ವಿಚಾರ. ಸ್ವಾಮಿ–ಒಡೆಯ. ಇದ್ದು ಉಣಬೇಕು–ದುಡಿದು ಉಳಿಸಿ ಉಣಬೇಕಲ್ಲದೆ, ಸಾಲಮಾಡಿ ಅಲ್ಲ. ನಾಳೆಗೆ ಮಡಗಿ, ಉಣಬೇಕು, ಎಲ್ಲವನ್ನು ಇಂದೇ ಮುಗಿಸುವುದಲ್ಲ. (ಕವಿಯು ಶಿವಾಚಾರದ ಆರಾಧ್ಯ ಬ್ರಾಹ್ಮಣನು. ಶಿವಪ್ರಾರ್ಥನೆಯನ್ನೆ ಮಾಡುವನು. ಅವನ ಹೆಸರೂ ಸೋಮೇಶ್ವರ. ಪ್ರತಿ ಪದ್ಯದ ಕೊನೆಗೂ ಹೀಗೆ ಹೆಸರು ಹೇಳುವುದು ಶತಕಗಳ ರೂಢಿ.) 4. ಮಡೆಯ–ಮೂಢ. ಬೆಟ್ಟ–ಅಸಾಧ್ಯವಾದುದು. ಜಡದೇಹಿ–ಆಲಸ್ಯಗಾರ. ಮುಪ್ಪು+ಅಡಸಿರ್ದ–ಮುದುಕನಾದ. ರುಣ–ಸಾಲ. ಇಡೆ–ತನ್ನ ಹಣವನ್ನು ಅಡಗಿಸಿಡುವುದಕ್ಕೊಂದು ಗುಪ್ತ ಸ್ಥಳ. 5. ಕೈ+ಆಸೆ–ತನ್ನ ಪ್ರಯೋಜನಾಪೇಕ್ಷೆ. ಧಾರ್ಮಿಕ–ಧರ್ಮ ಬಲ್ಲ ಯೋಗ್ಯನು. ಭಜಕ–ಭಕ್ತ. 6. ಇಂದುಗೆ ದೊರೆಯೆ–ಚಂದ್ರನಿಗೆ ಸಮಾನವೆ? ಮಿಕ್ಕಾದ–ಉಳಿದ. ಪಾಷಾಣ–ಕಲ್ಲು. ಜೀವ(ವನ್ನು ಉಳಿಸುವ) ರತ್ನ–ಸಂಜೀವನ ಮಣಿ. ಉರಗ+ಇಂದ್ರ(ಗುಣ ಸಂಧಿ). ಪಸರ್ ಪಾವು–ಹಸುರು ಹಾವು. 7. ಉಗ್ರದೆ–ಕಠಿನವಾಗಿ. ಮೆಲ್ಲೆ–ತಿಂದರೆ. ಪೆತ್ತ–ಹೆತ್ತ. ಊಡಿಸು–ತಿನ್ನಿಸು. ಪೆರ–ಅನ್ಯನು. 9. ಚರಿಪ–ಸಂಚರಿಸುವ. ಅರಣ್ಯಕ–ಕಾಡಲ್ಲಿರುವ. ಗೊಡ್ಡು–ಫಲಬಾರದ+ಫಲಂತೀವಿದ ಬಳಲು–ಬಾಡು. ಭೃಂಗ–ತುಂಬಿಗೆ ಬೇರೆ ಹೂವೇ ದೊರೆಯದೇ? ಪುಸಿಯಂ....–ಕಾವ್ಯವನ್ನು ಬರೆ, ಧನಕೊಡುವೆನು ಎಂದು ನಂಬಿಸಿ, ಬರೆದ ಬಳಿಕ ಕೊಡದಿರಲು ಏನಾಯಿತು? ದಾತ–ಉದಾರಿ. [ದೀಪಕ] 10. ಉಡುರಾಜಂ–ನಕ್ಷತ್ರಾಧಿಪನಾದ

ಚಂದ್ರ. ಕಳೆ....—ಕಾಂತಿ ತಗ್ಗಿ ಹೆಚ್ಚಾದೆ ಇರುವನೆ? ನ್ಯಗ್ರೋಧ—ಆಲದಬೀಜವು ಬಲು ಸಣ್ಣಗೆ ಇದೆ. ಕೆಲಂ—ಪಕ್ಕದಲ್ಲಿ ಸಿಡಿದು—ಹಾರಿಬಿದ್ದು. ಪಿರಿದು+ಮರನು. ದೈವದ + ಒಲುಮೆ—ದೇವರ ದಯೆ. ಆ ಕಾಲ + ಅನುಕಾಲಕ್ಕೆ—ಬಂದಲ್ಲದಿದ್ದರೆ ಮತ್ತೊಂದು ಕಾಲದಲ್ಲಿ. ಬಲ್ಲಿದನು—ಸಿರಿವಂತ [ದೀಪಕ] 11. ಮುಪ್ಪಿನಲ್ಲಿ—ವಾರ್ಧಕ್ಯದಲ್ಲಿ ಸೇವೆಗೆ ಒದಗಿದ. ಮಣಿದುಂ ನೋಡದ—ಬಗ್ಗಿಕಾಣದ. ಕಾಲ+ ಉಚಿತಕ್ಕೆ—ತಕ್ಕ ಸಮಯಕ್ಕೆ. ತೃಣವೇ ಪರ್ವತ—ಹುಲ್ಲೇ ಬೆಟ್ಟ; ಅಲ್ಪವೇ ಮಹತ್ತು. 12. ಜಹ್ನು ರಾಜರ್ಷಿಯ ಕಿವಿಯಿಂದ ಹೊರಟವಳು ಜಾಹ್ನವಿ, ಗಂಗೆ. ವಸನ—ವಸ್ತ್ರ. ಶುಕ್ರ+ ಅಂಬರ—ಬಿಳೀ ಬಟ್ಟೆ. ವೆಗ್ಗಳ—ಶ್ರೇಷ್ಠ. ರಸ (ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ, ಶಾಂತಿ ಎಂಬ ನವರಸಗಳು) ಬಲ್ಮೆ—ಉತ್ತಮವಾದುದು. 13. ರಜನಿ—ರಾತ್ರಿ. ಕುವರ (ತ್ಸ—ಕುಮಾರ) ಅಂಭಃ+ ಜ—ತಾವರೆ+ಆಳಿ—ಸಮೂಹ ಹವಿ—ಹೋಮಕ್ಕೆ ಉಪಯೋಗವಾದ ತುಪ್ಪ ಇತ್ಯಾದಿ. ಆಸ್ಥಾನ—ರಾಜಸಭೆ. ಸುರೆ—ಹೆಂಡ. ತೇಜ+ಗೌರವ ಮಾನಿತ—ಮರ್ಯಾದೆಯುಳ್ಳವ. ಬಲ್ಲನೆ (ತಿಳಿವನೆ, ಸಹಿಸುವನೆ) ಬಾಳ್ವರಂ—ಉತ್ತಮ ರೀತಿಯಲ್ಲಿರುವವರನ್ನು. 15. (ಕಹಿ)ಬೇವು. ಸ್ವಾದು—ರುಚಿ. ತೇಳ್ (ಹ. ಗ)—ಚೇಳು (ಹೊ. ಗ) ಪಾಲಂ+ಊಡಿ—ಹಾಲು ಕುಡಿಸಿ. ಖಗ—ಪಕ್ಷಿ. ಗೂಗೆ (ತ್ಸ—ಘೂಕ) ಓವರು—ಸಾಕುವರು. ಹಗೆಯನ್ನು ಚಿಕ್ಕವನೆನಲಾಗದು. 16. ಮುಕುರ—ಕನ್ನಡಿ. ಬೇಡಿದುದನ್ನು ಕೊಡುವ ಕಾಮಧೇನು ಇದ್ದೂ, ಊಟಕ್ಕೆ—ಕರೆದುಣಿಸುವುದಕ್ಕೆ ಗೊಡ್ಡು ದನವನ್ನು ಸಾಕುವರೆ? (ಆಹಾರದ) ಗುಣಬಲ್ಲವರು ಹಾಲು ಹಾಕಿ ಉಂಡ ಬಳಿಕ ಪುನಃ ಉಣುವರೆ? ಶುಕನ (ಗಿಳಿಯ)+ಓದು (ಮಾತು) ಉರೆ ಚೆಲ್ವೆಕಾಕರವ—ಕಾಗೆಯ ಶಬ್ದವು ಹೆಚ್ಚು ಅಂದವಾದುದೆ? ರಂಭೆಯ ನಾಟ್ಯಕ್ಕಿಂತ ಡೊಂಬರ ನಾಟ್ಯವೆ? ಸಖ—ಗೆಳೆಯ. ಉನ್ನತ ವಸ್ತು—ಹೆಚ್ಚಿನ ಒಡೆವೆ ಇರುವುದೆ?

---

ಈ ಟಿಪ್ಪಣಿಯನ್ನು ಬರೆವುದರಲ್ಲಿ ನನಗೆ ಧಾರಾಳವಾದ ಸಹಾಯವನ್ನು ಮಾಡಿರುವವರೊಳಗೆ ಕುಂದಾಪುರ ಹೈಸ್ಕೂಲ್ ಕನ್ನಡ ಪಂಡಿತರು ಐ. ಶಿವರಾಮಯ್ಯನವರ ಉಪಕಾರವು ಚಿರಸ್ಮರಣೀಯವಾಗಿದೆ.

M. N. K.

1. ಸಂಧಿ, ಸಮಾಸ, ಅಲಂಕಾರ ಮೊದಲಾದುವುಗಳ ಉದಾಹರಣೆಗಳನ್ನು ಅಲ್ಲಲ್ಲಿ ಕೊಟ್ಟಿದೆ. ಈಗಣ ಪಾಠಪಟ್ಟಿಯಲ್ಲಿ ವ್ಯಾಕರಣ ಪಾಠಗಳು ಪ್ರತಿ ತರಗತಿಗೆ ಯಾವ್ಯಾವುವು, ಯಾವ್ಯಾವ ಪುಸ್ತಕಗಳಿಂದ ಕಲಿಸಬೇಕಾಗಿದೆ ಎಂಬುದೆಲ್ಲ ನಿರ್ದಿಷ್ಟವಾಗಿದೆಯಾದ ಕಾರಣ, ಬೇರೇ ಒಂದು ಪ್ರಕಟಣವನ್ನು ಈ ಭಾಗದಲ್ಲಿ ಮುದ್ರಿಸಿಲ್ಲ. ಅಲ್ಲಲ್ಲಿ ತೋರಿಸಿರುವ ಉದಾಹರಣೆಗಳನ್ನು ಕೂಡಿಸಿ, ಸೂಕ್ಷ್ಮವಾಗಿ ವಿಚಾರಿಸಿದರೆ, ಆಗಲೆ ಸಂಧಿ ಅಥವಾ ಸಮಾಸಗಳ ಸೂತ್ರಗಳನ್ನು ರಚಿಸಬರುವಂತಿದೆ. ಅವಕ್ಕನುಸಾರವಾದ ವಿಷಯವಿವರಣೆಯನ್ನು ಪದ್ಯ ವ್ಯಾಕರಣದಿಂದ ಓದಿಕೊಳ್ಳುವುದು.

2. ಅಲಂಕಾರಗಳನ್ನು ಅತಿ ಸಂಕ್ಷೇಪವಾಗಿ ವಿವರಿಸಿ ಹೇಳಲಾಗಿದೆ. ಈ ಪಾಠಗಳನ್ನೋದುವ ತರಗತಿಗಳಲ್ಲಿ ಅಲಂಕಾರಗಳನ್ನು ಕುರಿತು ಯಥಾ ಸಾಮಾನ್ಯವಾದ ತಿಳಿವಳಿಕೆ ಇದ್ದರೆ ಸಾಕಾಗುವುದು. ಆದರೂ ಆಯಾ ಉದಾಹರಣೆಗಳನ್ನು ವಿಮರ್ಶಿಸಿದರೆ ಅಲಂಕಾರಭೇದಗಳನ್ನು ತಿಳಿಯಲನುಕೂಲವಿದೆ.

3. ಕವಿಚಮತ್ಕಾರ ವಿಶೇಷವುಳ್ಳ ಪದ್ಯಗಳು ತಾವಾಗಿ ಸೂಚಿಸಿಕೊಳ್ಳುವುವು. ಅವನ್ನು ಬಾಯಿಪಾಠಮಾಡುವುದುತ್ತಮ.

4. ಒಂದೇ ವಿಷಯವಾಗುಳ್ಳ 2, 3, 4 ಪದ್ಯಗಳನ್ನು ಒಮ್ಮೆಯೆ ಓದಿಕೊಂಡು ಅವುಗಳ ಸ್ವಾರಸ್ಯವು ಮೂಡಿ ಬರುವ ಹಾಗೆ, ಯೋಗ್ಯ ಶೈಲಿಯನ್ನು ಉಪಯೋಗಿಸಿ, ವಿದ್ಯಾರ್ಥಿಗಳು ತಮ್ಮ ಮಾತುಗಳಲ್ಲೇ ಬರೆವುದು (ಸಂಗ್ರಹಿಸಿ ಅಥವಾ ಕೂಡಿಸಿ) ಉತ್ತಮ.



## ಕವಿಚರಿತೆ ಮುಂತಾದ ವಿಷಯಗಳು.

**ಸರ್ವಜ್ಞ ಪದ್ಯಗಳು:—** ಈ ಸರ್ವಜ್ಞ ಪದ್ಯಗಳನ್ನು ಬರೆದ ಕವಿಯು ಹೆಸರು ಪುಷ್ಪದತ್ತನೆಂದು. ಸರ್ವಜ ನೆಂಬುವುದು ಇವನ ಬಿರುದು. ಧಾರವಾಡ ಜಿಲ್ಲೆಯ ಮಾಸೂರು ಎಂಬ ಗ್ರಾಮದಲ್ಲಿ ಬಸವರಸನೆಂಬ ಆರಾಧ್ಯಬ್ರಾಹ್ಮಣನೊಬ್ಬ ನಿದ್ದನು. ಅವನ ಹೆಂಡತಿಯು ಹೆಸರು ಮಲ್ಲಮ್ಮನೆಂದು; ಈತನಿಗೆ ಮಕ್ಕಳಿಲ್ಲದುದ ರಿಂದ ಕಾಶಿಗೆ ಹೋಗಿ ಅಲ್ಲಿ ಶಿವನಿಂದ ಪಡೆದ ಪ್ರಸಾದವನ್ನು ನುಂಗಿ ತಿರುಗಿ ತನ್ನೂ ರಿಗೆ ಬರುವಾಗ ದಾರಿಯಲ್ಲಿ ಅಂಬಲೂರಲ್ಲಿದ್ದ ಕುಂಬಾರಮಾಳಿಯೆಂಬವಳನ್ನು ಮದುವೆಯಾಗಲು, ಅವಳು ಗರ್ಭಿಣಿಯಾಗಿ ಇವನನ್ನು ಹೆತ್ತಳು. ಇವನ ಕಾಲವು ಸುಮಾರು ಕ್ರಿ. ಶ. 1770 ಆಗಿರಬೇಕೆಂದು ಊಹಿಸುತ್ತಾರೆ.

ಇವನ ಪದ್ಯಗಳೆಲ್ಲಾ ತ್ರಿಪದಿಯಲ್ಲಿ ಬರೆಯಲ್ಪಟ್ಟು ಪ್ರತಿ ಪದದ ಕೊನೆ ಯಲ್ಲಿಯೂ 'ಸರ್ವಜ್ಞ'ನೆಂದು ಮುಗಿಯುವುದು. ತತ್ವ, ಜ್ಯೋತಿಷ, ಕಾಲಜ್ಞಾನ, ವೈದ್ಯ, ರಸವಾದ ಮುಂತಾದ ಹಲವು ವಿಷಯಗಳ ಮೇಲೆ ಇವನು ಪದ್ಯಗಳನ್ನು ಬರೆದಿರುವನು.

**ಶಾಂತಿಪರ್ವದೊಳಗಣ ಪದ್ಯಗಳು:—** ಮಹಾಭಾರತದ ಶಾಂತಿ ಪರ್ವದಿಂದ ತೊಡಗಿ ಮಹಾಪ್ರಸ್ಥಾನ ಸ್ವರ್ಗಾರೋಹಣದ ವರೆಗಿನ ಎಲ್ಲಾ ಪರ್ವಗಳ ಸ್ವಾರಸ್ಯವನ್ನು ಕನ್ನಡದಲ್ಲಿ ಪದ್ಯರೂಪವಾಗಿ ಬರೆದವನು ತಿಮ್ಮಣ್ಣಕವಿಯು; ಇವನು ಬ್ರಾಹ್ಮಣನು; ಭಾರದ್ವಾಜಗೋತ್ರದವನು; ಇವನ ತಂದೆಯ ಹೆಸರು ಗದುಗಿನ ಭಾನು ಕವಿ; ವಿಜಯನಗರದ ಪ್ರಬಲರಾಯನಾದ ಕೃಷ್ಣರಾಯನ ಆಜ್ಞಾನುಸಾರ ಈ ಗ್ರಂಥ ವನ್ನು ಬರೆದನೆಂದು ಹೇಳುವುದರಿಂದ ಈ ಕವಿಯ ಕಾಲವು ಕ್ರಿ. ಶ. 1510 ಆಗಿರ ಬೇಕು. ಇವನು ರಚಿಸಿದ ಭಾರತಕ್ಕೆ ಕೃಷ್ಣರಾಯಭಾರತವೆಂದೂ ಹೆಸರಿರುವುದು.

**ಶಾಂತಿಪರ್ವ:—** ಮಹಾಭಾರತ ಯುದ್ಧದಲ್ಲಿ ಯುಧಿಷ್ಠಿರನು ದುರ್ಯೋ ಧನಾದಿಗಳನ್ನು ಕೊಂದು ಹಸ್ತಿನಾವತಿನಗರವನ್ನು ಪ್ರವೇಶಿಸಲಾಗಿ, ಅಲ್ಲಿ ದುರ್ಯೋ ಧನ, ಕರ್ಣ ಮುಂತಾದವರ ಮನೆಗಳು ಹಾಳುಬಿದ್ದು ಬರಿದಾಗಿರುವುದನ್ನು ಕಂಡು, ಈ ಅನರ್ಥಕ್ಕೆಲ್ಲಾ ತಾನೇ ಕಾರಣನೆಂದು ಭಾವಿಸಿ, ದುಃಖದಿಂದ ಅರಣ್ಯಕ್ಕೆ ಹೊರ ಡಲು, ಶ್ರೀ ಕೃಷ್ಣನು ಅವನನ್ನು ಸಮಾಧಾನಪಡಿಸುವುದಕ್ಕಾಗಿ, ತಂದೆಯ ವರಬಲ ದಿಂದ ಇನ್ನೂ ಬದುಕಿದ್ದ ಭೀಷ್ಮನ ಬಳಿಗಾಗಿ ಕುರುಕ್ಷೇತ್ರಕ್ಕೆ ಒಯ್ದನು. ಅಲ್ಲಿ ಭೀಷ್ಮನು ಇವನ ದುಃಖ ಶಾಂತಿಗಾಗಿ ಹಲವು ನೀತಿಕಥೆಗಳನ್ನೂ ಧರ್ಮವಿಚಾರವನ್ನೂ ಉಪದೇಶಿಸಿದನು. ಅವುಗಳಲ್ಲಿ ನೀಚರನ್ನು ಉತ್ತಮ ಪದವಿಗೆ ತಂದರೂ ಅವರು ತಮ್ಮ ನೀಚಸ್ವಭಾವವನ್ನು ಬಿಡರೆಂಬುವುದಕ್ಕೆ ನಾಯಿಯ ಕಥೆಯನ್ನೂ, ಹೀನನು ಅಧಿಕನನ್ನು ಜರೆದರೆ ಅವನಿಗೆ ತನ್ನಷ್ಟಕ್ಕೇ ಹಾನಿದೊರೆಯುವುದೆಂಬುವುದಕ್ಕೆ ಶಾಲ್ಮ

ಲಿಯ ಕಥೆಯನ್ನೂ 'ಬಲವದ್ವಿರೋಧಿಯ ಸಮುಳದಿಂದ ಆತ್ಮ ಪ್ರಯೋಜನದ ಅನುವ ನೊಡೆಗೂಡಿ ಅದು ಘಟಿಸಿದ ಬಳಿಕ ತೊಲಗಿಸ್ಪುದು' ಎಂಬುವುದಕ್ಕೆ ಇಲಿ ಬೆಕ್ಕುಗಳ ಕಥೆಯನ್ನೂ, ಮರೆಹೊಕ್ಕ ಶತ್ರುವಿಗಾದರೂ ಉಪಕಾರ ಮಾಡಬೇಕೆಂಬುವುದಕ್ಕೆ 'ಕಪೋತಾಖ್ಯಾನ'ವನ್ನೂ ಹೇಳುವನು.

**ಅನುಭವಾಮೃತ:**— ಈ ಗ್ರಂಥವನ್ನು ಬರೆದವನು ರಂಗನಾಥನು. ಇವನ ಕಾಲವು ಸುಮಾರು ಕ್ರಿ. ಶ. 1675. ಇವನ ತಂದೆ ಸಹವಾಸಿ ವಂಶದ ಮಹಾಲಿಂಗ ದೇವ; ಗುರು ಸಹಜಾನಂದ ಯೋಗಿ; ಶ್ರೀಗಿರಿಯ ಮಲ್ಲಿಕಾರ್ಜುನನು ಇವನ ಇಷ್ಟ ದೇವತೆ; ಸಹವಾಸಿ ವಂಶವೆನ್ನುವುದರಿಂದ ಬ್ರಾಹ್ಮಣನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಸಂತತಿಯಾಗಿದ್ದರೂ ಇರಬಹುದು.

**ಭಾಗವತದೊಳಗಣ ಪದ್ಯ:**— ಸಂಸ್ಕೃತದಲ್ಲಿ ವ್ಯಾಸಮಹರ್ಷಿಗಳಿಂದ ಪ್ರಣೀತವಾದ ಭಾಗವತದ ಕನ್ನಡ ಪದ್ಯಾತ್ಮಕವಾದ ಅನುವಾದವೇ ಕನ್ನಡಭಾಗವತವು. ಇದನ್ನು ಬರೆದವನು ಚಾಟು ವಿಟ್ಠಲನಾಥನು. ಇವನ ಕಾಲವು ಸುಮಾರು ಕ್ರಿ. ಶ. 1530. ಇವನು ಭಾಗವತದ ದ್ವಾದಶಸ್ಕಂಧಗಳನ್ನು ಬರೆದಿರುವನು. ಇವನಿಗೆ ಸದಾನಂದ ಮತ್ತು ನಿತ್ಯಾತ್ಮಶುಕನೆಂದು ಬಿರುದುಗಳಿದ್ದಂತೆ ತೋರುವುದು. ಇವನ ಗುರು ಅಚ್ಯುತಾರಣ್ಯಯತಿ. ಇವನು ತನ್ನ ಗ್ರಂಥದಲ್ಲಿ ಅಚ್ಯುತಕೃಷ್ಣರಾಯನ ವಿಷಯವಾಗಿಯೂ, ವಿಜಯನಗರದ ವಿಷಯವಾಗಿಯೂ ಹೇಳುವುದರಿಂದ 1506 ರಿಂದ 1542ರ ವರೆಗೆ ಆಳಿದ ವಿಜಯನಗರದ ಕೃಷ್ಣರಾಯ ಅಚ್ಯುತರಾಯರ ಕಾಲ ದಲ್ಲಿ ಇರಬೇಕೆಂದೂ, ಇವರೇ ಕವಿಯ ಪೋಷಕರಾಗಿರಬೇಕೆಂದೂ ಊಹಿಸುತ್ತಾರೆ.

ಕನ್ನಡಭಾಗವತವು ಭಾಮಿನೀಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಹಸ್ತಿನಾನಗರದ ಅರಸನಾದ ಪರೀಕ್ಷಿದ್ರಾಜನು ಒಮ್ಮೆ ಬೇಟೆಗೆ ಹೋಗಿದ್ದಾಗ ಒಂದು ಮೃಗವನ್ನು ಅಟ್ಟಿಕೊಂಡು ಹೋದನು. ಅದು ತಪ್ಪಿಸಿಕೊಂಡು ಎಲ್ಲಿಯೋ ಓಡಿಹೋಯಿತು. ಪರೀಕ್ಷಿತನು ಅದನ್ನು ಹಿಂಬಾಲಿಸಿ ಬಂದು, ದಾರಿಯಲ್ಲಿ ಮೌನವಾಗಿ ಕುಳಿತಿದ್ದ ಶೂಕ ನೆಂಬ ಒಬ್ಬಾನೊಬ್ಬ ಋಷಿಯೊಡನೆ ಮೃಗವು ಓಡಿದ ದಾರಿಯನ್ನು ಕೇಳಿದನು. ಋಷಿಯು ಮಾತಾಡಲಿಲ್ಲ. ಆಗ ಪರೀಕ್ಷಿತನು ಬೇಸತ್ತು, ಅಲ್ಲಿಯೇ ಸತ್ತು ಬಿದ್ದಿದ್ದ ಒಂದು ಹಾವನ್ನು ತೆಗೆದು, ಋಷಿಯ ಕೊರಳಿಗೆ ಸುತ್ತಿ ಹೋಗಲು, ಮನೆಯಲ್ಲಿ ಮಕ್ಕ ಳೊಡನೆ ಆಡುತ್ತಿದ್ದ ಶೃಂಗಿ ಎಂಬ ಆ ಋಷಿಪುತ್ರನನ್ನು ಆ ಹುಡುಗರು ಅವನಪ್ಪನ ಕೊರಳಿಗೆ ಹಾವನ್ನು ಸುತ್ತಿದ ವಿಷಯವನ್ನು ಎತ್ತಿ ಹೀಯಾಳಿಸಲು, ಆತನು ಕೋಪ ದಿಂದ ತನ್ನಪ್ಪನ ಕೊರಳಿಗೆ ಸತ್ತ ಹಾವನ್ನು ಸುತ್ತಿದವನನ್ನು ಇಂದಿಗೆ ಏಳನೆಯ ದಿನ ವಿಷವೀರ್ಯನಾದ ತಕ್ಷಕನು ಕಚ್ಚಿ ಕೊಲ್ಲಲಿ ಎಂದು ಶಾಪವಿತ್ತನು. ಇದನ್ನು ಕೇಳಿದ ಪರೀಕ್ಷಿತನು ರಾಜ್ಯವನ್ನು ತೊರೆದು ಗಂಗೆಯ ನಡುವೆ ಒಂದೇ ಸ್ತಂಭದ ಮೇಲೆ

ಕಟ್ಟಿದ ಕಟ್ಟಡದಲ್ಲಿ ಕುಳಿತು ಮೋಕ್ಷಪ್ರದವಾದ ಈ ಭಾಗವತ ಕಥೆಯನ್ನು ಶುಕ ಯೋಗಿಯ ಬಾಯಿಂದ ಕೇಳಿದನು. ಅದರಲ್ಲಿ ಕುಚೇಲನ ಚರಿತ್ರೆ, ಕೃಷ್ಣಾವತಾರ ಕಥೆ ಇವು ದಶಮಸ್ಕಂಧದಲ್ಲಿಯೂ, ಧ್ರುವ ಚರಿತ್ರೆ ಚತುರ್ಥಸ್ಕಂಧದಲ್ಲಿಯೂ ಬರುವುವು.

ತನ್ನ ತಂದೆಯಾದ ಪರೀಕ್ಷಿತನನ್ನು ತಕ್ಷಕನು ವಂಚನೆಯಿಂದ ಕಚ್ಚಿಕೊಂದುದಲ್ಲದೆ, ಮದ್ದುಕೊಟ್ಟು ಬದುಕಿಸಲಿಕ್ಕೆ ಬಂದಿದ್ದ ಕಾಶ್ಯಪನೆಂಬ ಬ್ರಾಹ್ಮಣನನ್ನು ಹಿಂದೆ ಕಳುಹಿಸಿದುದರಿಂದ, ಜನಮೇಜಯನು ಸರ್ಪಯಾಗಮಾಡಿದನು. ಈ ದೋಷದಿಂದ ಆತನಿಗೆ ತೊನ್ನು ಹಿಡಿಯಿತು. ಅದರ ಶಮನಕ್ಕಾಗಿ ವ್ಯಾಸಶಿಷ್ಯನಾದ ವೈಶಂಪಾಯನ ಋಷಿಯ ಮುಖದಿಂದ ಈ ಕಥೆಯನ್ನು ಕೇಳಿದನು.

**ಕನ್ನಡ ಭಾರತ:**—ಭಾರತದ ಮೊದಲಿನ ಹತ್ತು ಪರ್ವಗಳ ಕಥಾಭಾಗವನ್ನು ಕನ್ನಡದಲ್ಲಿ ಪದ್ಯಾತ್ಮಕವಾಗಿ ಬರೆದವನು ಕುಮಾರವ್ಯಾಸನು. ಇವನ ಕಾಲವು ಸುಮಾರು ಕ್ರಿ. ಶ. 1430. ಇವನು ಬ್ರಾಹ್ಮಣಕವಿ. ಧಾರವಾಡ ಜಿಲ್ಲೆಯ ಗದುಗು ತಾಲೂಕಿನ ಕೋಳಿವಾಡ ಗ್ರಾಮವು ಇವನು ಹುಟ್ಟಿದ ಊರು. ಇವನ ನಿಜವಾದ ಹೆಸರು ನಾರಣಪ್ಪಗೌಡನೆಂದು. ಇವನು ಗದುಗಿನ ವೀರನಾರಾಯಣದೇವರ ಭಕ್ತನು. ಆ ದೇವರ ಹೆಸರಲ್ಲಿಯೇ ಭಾರತವನ್ನು ಬರೆದಿರುವನು. ಕ್ರಿ. ಶ. 1419—1446ರ ವರೆಗೆ ವಿಜಯನಗರವನ್ನು ಆಳಿದ ಪ್ರೌಢ ದೇವರಾಯನ ಕಾಲದಲ್ಲಿ ಈ ಕವಿಯು ಇದ್ದನು. ಇವನ ಗ್ರಂಥವು ಭಾಮಿನೀಷಟ್ಪದಿಯಲ್ಲಿ ಅತ್ಯಂತ ಮನೋಹರವಾಗಿ ಬರೆಯಲ್ಪಟ್ಟಿರುವುದು.

**ಶಕುನಿಯ ನೀತಿ:**—ಪಾಂಡವರೂ ಕೌರವರೂ ಚಿಕ್ಕಂದಿನಲ್ಲಿ ಹಸ್ತಿನಾನಗರದಲ್ಲಿರುವ ವೇಳೆ, ದುರ್ಯೋಧನನು ಪಾಂಡವರ ಏಳಿಗೆಯನ್ನು ನೋಡಿ ಸಹಿಸಲಾರದೆ, ಅವರ ವಿನಾಶಕ್ಕಾಗಿ ಏನುಮಾಡಬೇಕೆಂದು ಕೇಳಲು, ಹಿತಶತ್ರುವಾದ ಶಕುನಿಯು, ಅವನಿಗೆ ಪಾಂಡವರ ಶಕ್ತಿಯನ್ನು ವರ್ಣಿಸಿ, ವಾರಣಾವತದಲ್ಲಿ ಅರಗಿನ ಮನೆಯ ನಿರ್ಮಾಣಕ್ಕೆ ಸಲಹೆಯನ್ನು ಕೊಡುವನು.

**ಬಕಾಸುರ ವಧೆ:**—ದುರ್ಯೋಧನನು ಮತ್ಸರದಿಂದ ವಾರಣಾವತಿಯಲ್ಲಿ ಮಾಡಿಸಿದ ಅರಗಿನಮನೆಯಿಂದ ಪಾಂಡವರು ತಪ್ಪಿಸಿಕೊಂಡು ಹೊರಟು, ಏಕಚಕ್ರವೆಂಬ ಪಟ್ಟಣವನ್ನು ಸೇರಿ, ಅಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಅತಿಥಿಗಳಂತೆ ಇದ್ದು, ಭಿಕ್ಷಾವೃತ್ತಿಯಿಂದ ಜೀವಿಸಿಬರುತಿದ್ದರು. ಆ ಪಟ್ಟಣದ ರಾಜಧಾನಿಯಾದ ವೇತ್ರಕೀಯಗೃಹವೆಂಬಲ್ಲಿ ಒಬ್ಬ ರಾಜನಿದ್ದರೂ, ಏಕಚಕ್ರದ ನೆರೆಯ ಗುಡ್ಡಗಳಲ್ಲಿ ವಾಸವಾಗಿದ್ದ ಬಕನೆಂಬ ಒಬ್ಬ ರಕ್ಕಸನಿಗೆ ಆ ಅರಸನು ಹೆದರಿ, ಆ ಪಟ್ಟಣದಿಂದ ದಿನಕ್ಕೆ ಒಂದಾಳು, ಎರಡು ಕೋಣ, ಒಂದು ಬಂಡಿ ತುಂಬಾ ಅನ್ನ ಮೊದಲಾದುವು

ಗಳನ್ನು ಕಳುಹಿಸಿಕೊಡುವುದಾಗಿ ಒಪ್ಪಂದಮಾಡಿಕೊಂಡಿದ್ದನು. ಈ ಸಾಮಾಗ್ರಿಯು ಬಾರದ ದಿನ ಅವನು ಪಟ್ಟಣಕ್ಕೆ ಬಂದು ಸಿಕ್ಕಿದವರನ್ನು ಕೊಲ್ಲುತಿದ್ದನು. ಈ ಸಂದರ್ಭದಲ್ಲಿ ತಾವು ವಾಸವಾಗಿದ್ದ ಮನೆಯ ಬ್ರಾಹ್ಮಣನ ಸರದಿ ಬರಲು, ಅವನು ಅಳುವುದನ್ನು ಕೇಳಿ ಕುಂತಿಯು ಅಲ್ಲಿಗೆ ಹೋದಳು. ಮುಂದೆ ನಡೆದ ವೃತ್ತಾಂತ ವೆಲ್ಲಾ ಪದ್ಯದಲ್ಲಿ ಬಂದಿರುವುದು.

**ದ್ರೌಪದೀ ಸ್ವಯಂವರ:**— ಮುಂದೆ ಪಾಂಡವರು ಏಕಚಕ್ರದಿಂದ ಹೊರಟು ಪಾಂಚಾಲರಾಜನ ಮಗಳ ವಿವಾಹಕ್ಕೆ ಹೋಗುವ ಬ್ರಾಹ್ಮಣರೊಡನೆ ಹೊರಟು, ಅವನ ರಾಜಧಾನಿಯಾದ ಪಾಂಚಲ್ಯ ನಗರವನ್ನು ಸೇರಿ, ಅಲ್ಲಿ ಕುಂಬಾರ ಕೊಟ್ಟಿಗೆಯಲ್ಲಿ ಉಳುಕೊಂಡಿದ್ದು, ಆ ರಾಜಪುತ್ರಿಯನ್ನು ಅರ್ಜುನನಿಗೆ ವಿವಾಹಮಾಡಿ ಕೊಡುವುದಕ್ಕಾಗಿಯೇ ಪಾಂಚಾಲರಾಜನು ಪಡೆದಿರುವನೆಂಬುವುದನ್ನು ಕೇಳಿ, ಇವ ರೆಲ್ಲರೂ ಬ್ರಾಹ್ಮಣವೇಷದಿಂದ ಅವನ ಸ್ವಯಂವರ ಶಾಲೆಯನ್ನು ಸೇರಿ ಕುಳಿತಿರಲು, ಅರ್ಜುನನು ಯಂತ್ರಲಕ್ಷ್ಯವನ್ನು ಛೇದಿಸಿ, ದ್ರೌಪದಿಯನ್ನು ವಿವಾಹವಾದ ಕಥೆಯು;

**ದ್ರೌಪದಿಯ ಮೊರೆ**— ಯುಧಿಷ್ಠಿರನ ಸಂಪತ್ತನ್ನು ನೋಡಿ ಕರುಬುತ್ತಿದ್ದ ದುರ್ಯೋಧನನು ಅದನ್ನೆಲ್ಲಾ ಕವರಿಕೊಳ್ಳಬೇಕೆಂದು, ಹಸ್ತಿನಾನಗರದಲ್ಲಿ ಅವನೊಡನೆ ಜೂಜಾಡಿ, ಶಕುನಿಯ ಬಲದಿಂದ ಎಲ್ಲವನ್ನೂ ಅಪಹರಿಸಿದನು. ಮುಂದೆ ಪಣವಾಗಿ ಇಡುವುದಕ್ಕೆ ಏನೂ ಇಲ್ಲದಿರಲು, ತನ್ನನ್ನೂ ತನ್ನ ಸಹೋದರರನ್ನೂ ಇಟ್ಟು ಆಡಿ ದನು. ಆಗಲೂ ಸೋತು ಕೊನೆಗೆ ದ್ರೌಪದಿಯನ್ನು ಇಟ್ಟು ಆಡಿ ಸೋಲಲು, ದುಶ್ಯಾಸನನು ಅವಳನ್ನು ಸಭೆಗೆ ಎಳತಂದು, ಅವಳುಟ್ಟಿದ್ದ ಬಹು ಬೆಲೆಯಾದ ಸೀರೆ ಯನ್ನು ಸೆಳೆಯುತ್ತಿರಲು; ಸತ್ಯಪ್ರತಿಜ್ಞನಾದ ಧರ್ಮರಾಯನಿಗಾಗಿ ಅವನ ಸಹೋದ ರರು ಮಾತಾಡಲಾರದವರಾದರು. ಭೀಷ್ಮಾದಿಗಳು ದುರ್ಯೋಧನನ ಭಯದಿಂದ ಸುಮ್ಮನಿದ್ದರು. ಆಗ ದ್ರೌಪದಿಯು ಅನಾಥಬಂಧುವಾದ ಕೃಷ್ಣನಿಗೆ ಮೊರೆಯಿಡಲು, ಅವನು ಅವಳ ಮಾನವನ್ನು ಕಾದ ವಿವರವು.

**ಶ್ರೀ ಕೃಷ್ಣ ಸಂಧಾನ:**—ಮರುಜೂಜಿನಲ್ಲಿ ಸೋತುಹೋದ ಪಾಂಡವರು ಹದಿನೆರಡು ವರುಷ ಅರಣ್ಯವಾಸವನ್ನೂ ಒಂದು ವರ್ಷ ಅಜ್ಞಾತವನ್ನೂ ಕಳೆದು ವಿರಾಟನಗರದ ಬಳಿಯ ಉಪಪ್ಲವೆ ಎಂಬಲ್ಲಿದ್ದು, ಅಲ್ಲಿ ದುರ್ಯೋಧನನಿಂದ ತಮ್ಮ ಭಾಗವನ್ನು ಇಸುಕೊಳ್ಳುವುದಕ್ಕಾಗಿ ಪಾಂಡವರು, ತಮ್ಮ ಬಂಧುವಾಗಿಯೂ ಆಪ್ತ ನಾಗಿಯೂ ಇದ್ದ ಶ್ರೀ ಕೃಷ್ಣನನ್ನು ತಮ್ಮ ರಾಯಭಾರಿಯನ್ನಾಗಿ ಹಸ್ತಿನಾನಗರಕ್ಕೆ ಕಳುಹಿದರು. ಇದರ ವರ್ಣನೆಯೇ ಕೃಷ್ಣಸಂಧಾನವು.

**ಕರ್ಣಕೃಷ್ಣ ಸಂವಾದ:**— ಸಂಧಾನವು ಮುರಿದುಹೋಗಲು ತಿರುಗಿ ಬರುತ್ತಿದ್ದ ಕೃಷ್ಣನು, ಮಹಾ ಬಲಪರಾಕ್ರಮಿಯಾಗಿ ದುರ್ಯೋಧನನ ಪಕ್ಷದಲ್ಲಿ ಹೋ

ರಾಡುವ ಕರ್ಣನ ಕೈಯಲ್ಲಿ ಮುಂದೆ ಭಾರತದ ಯುದ್ಧದ ವೇಳೆ ಧರ್ಮ, ಭೀಮ, ನಕುಲ, ಸಹದೇವರು ಸಿಕ್ಕಬಹುದಾದುದರಿಂದ ಅವರಿಗೆ ಅಪಾಯವಿಲ್ಲದಂತೆಯೂ, ಸರ್ಪಬಾಣದಿಂದ ಅರ್ಜುನನಿಗೆ ಬಾಧೆಬಾರದಂತೆ ಮಾಡುವುದಕ್ಕಾಗಿಯೂ ಕರ್ಣನಿಗೆ ಕುಂತಿಯು ತಾಯಿಯೆಂದೂ ಪಾಂಡವರು ಸಹೋದರರೆಂದೂ ಅರುಹಿದನು. ಇದರಿಂದ ಕರ್ಣನಿಗೆ ಪಾಂಡವರ ಮೇಲೆ ಮೋಹವುಂಟಾಗಿ, ಯುದ್ಧದಲ್ಲಿ ಕೈಮೀರಲಾರದೆ ಹೋದನು.

**ಕರ್ಣಕುಂತೀ ಸಂವಾದ:**— ಕೃಷ್ಣನು ಹಸ್ತಿನಾನಗರದಿಂದ ಬರುತ್ತಾ, ಕುಂತಿಗೆ ನೀನು ಕರ್ಣನ ಬಳಿಗೆ ಹೋಗಿ 'ಪಾಂಡವರೈವರನ್ನು ಕೊಲ್ಲೆನೆಂದೂ ತೊಟ್ಟ ಬಾಣವನ್ನು ತೊಡುವುದಿಲ್ಲವೆಂದೂ ಭಾಷೆಯನ್ನು ಪಡೆ' ಎಂದು ಹೇಳಲು, ಕುಂತಿಯು ಅಂತೆಯೇ ಮಾಡಿದಳು.

**ಕರ್ಣಾವಸಾನ:**— **ಕೌರವ** ಪಾಂಡವರಿಗೆ ಯುದ್ಧವೇ ನಿಶ್ಚಯವಾಗಲು, ದುರ್ಯೋಧನನು ತನ್ನ ಕಡೆಯ ಸೇನಾಪತಿಯನ್ನಾಗಿ ಭೀಷ್ಮನಿಗೆ ಪಟ್ಟ ಕಟ್ಟಿದನು. ಇವನು ಹತ್ತು ದಿನ ಕಾದಿ ಶರಶಯ್ಯೆಯನ್ನು ಹೊಂದಲು, ಗುರುವಾದ ದ್ರೋಣನಿಗೆ ಸೇನಾಪಟ್ಟಗಟ್ಟಿದನು. ಇವನು ಐದು ದಿನ ಯುದ್ಧಮಾಡಿ 'ಅಶ್ವತ್ಥಾಮ ಹತಃ' ಎಂದು ಹೇಳಿದ ಧರ್ಮರಾಯನ ಮಾತನ್ನು ನಂಬಿ, ಯುದ್ಧದಲ್ಲಿ ವೈರಾಗ್ಯವನ್ನು ಹೊಂದಿ ಸ್ವರ್ಗಗತಿಯನ್ನು ಪಡೆದನು. ಆಗ ಕೌರವನು ಮಿತ್ರನಾದ ಕರ್ಣನಿಗೆ ಸೇನಾಪಟ್ಟ ಕಟ್ಟಿದನು. ಇವನು ಎರಡೇ ದಿನ ಯುದ್ಧಮಾಡಿ ವಿಪ್ರಶಾಪದಿಂದ ರಥಚಕ್ರವು ಭೂಮಿಯಲ್ಲಿ ಹೂತುಹೋಗಲು ಅದೇ ವೇಳೆ ಅರ್ಜುನನ ಬಾಣದಿಂದ ಮೃತನಾದನು. [ವಿಶೇಷ ವಿವರಣೆಗಾಗಿ 'ಕರ್ಣನ ಕಥೆ'ಯನ್ನು ಓದುವುದು]

**ದುರ್ಯೋಧನನ ಕೋಪೋದ್ದೀಪನ:**— ಕಟ್ಟಕಡೆಗೆ ದುರ್ಯೋಧನನು ಬಂಧುಮಿತ್ರಾದಿಗಳು ಸರ್ವರನ್ನು ಕಳಕೊಂಡು, ಶಲ್ಯನು ಮಡಿದು, ತನ್ನ ಸೋದರಮಾವನಾದ ಶಕುನಿಯನ್ನು ಸಹದೇವನು ಕೊಲ್ಲಲು, ಹತಾಶನಾಗಿ ಪಾಂಡವರಿಗೆ ಮರೆಯಾಗಿದ್ದು ಬದುಕಿಕೊಳ್ಳಬೇಕೆಂದು ಬಗೆದು, ದ್ವೈಪಾಯನವೆಂಬ ಸರೋವರಕ್ಕೆ ಹೋಗಿ ಜಲಸ್ತಂಭ ವಿದ್ಯೆಯಿಂದ ನೀರಲ್ಲಿ ಮುಳುಗಿ, ಅಡಗಿ ಕೂತನು. ಇದನ್ನು ಕಂಡಿದ್ದ ಭೀಮನ ಕಡೆಯ ಇಬ್ಬರು ವ್ಯಾಧರು ಆತನಿಗೆ ಬಂದು ತಿಳಿಸಲು ಸರ್ವಪಾಂಡವರೂ ಸೇನಾಸಹಿತರಾಗಿ ಅಲ್ಲಿಗೆ ಹೋಗಿ ಆ ಸರೋವರವನ್ನು ಮುತ್ತಿ ದುರ್ಯೋಧನನನ್ನು ನೀರಿಂದ ಹೊರಡಿಸುವುದಕ್ಕಾಗಿ ಧರ್ಮರಾಯನು ಮೊದಲುಗೊಂಡು ಮಾತಾಡತೊಡಗಿದರು. [ವಿಶೇಷ ವಿವರಣೆಗಾಗಿ 'ಗದಾಯುದ್ಧ ಕಥೆ' ಓದಿರಿ.]

**ತೊರವೆರಾಮಾಯಣದೊಳಗಣ ಪದ್ಯಗಳು:**— ಸಂಸ್ಕೃತದಲ್ಲಿ ವಾಲ್ಮೀಕಿ ಋಷಿಯಿಂದ ಬರೆಯಲ್ಪಟ್ಟ ರಾಮಾಯಣ ಕಥೆಯ ಸಾರರೂಪವಾದ

ತೊರವೆಯ ರಾಮಾಯಣವನ್ನು ಬರೆದವನು ಕುಮಾರ ವಾಲ್ಮೀಕಿಯು. ಇವನ ಕಾಲವು ಸುಮಾರು ಕ್ರಿ. ಶ. 1500. ಇವನು ಬ್ರಾಹ್ಮಣನು. ಈತನ ನಿಜವಾದ ಹೆಸರು ನರಸಿಂಹನೆಂದಿರಬೇಕು. ಕುಮಾರವಾಲ್ಮೀಕಿ ಎಂಬುವುದು ಇವನ ಬಿರುದು. ಇವನ ಊರು ಸೋಲಾಪುರ ಜಿಲ್ಲೆಯೊಳಗಣ ತೊರವೆ ಎಂಬ ಗ್ರಾಮ; ಅಲ್ಲಿಯ ನರಹರಿ ದೇವರ ಅಂಕಿತದಲ್ಲಿ ಈ ಗ್ರಂಥವನ್ನು ಬರೆದಿರುವನು. ಇವನ ಊರು ತೊರವೆಯಾದುದರಿಂದ ಈ ರಾಮಾಯಣಕ್ಕೆ ತೊರವೆ ರಾಮಾಯಣವೆಂದೂ ಕರೆಯುವರು.

**ಶ್ರೀ ರಾಮ ವನಗಮನ:**—ದಶರಥನು ತಾನು ವೃದ್ಧನಾದುದರಿಂದ ರಾಮನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಬಗೆದನು. ಇದನ್ನು ತಿಳಿದ ಕೈಕೇಯಿಯ ದಾಸಿಯಾದ ಮಂಥರೆಯು ತನ್ನೊಡತಿಯ ಮಗನಾದ ಭರತನಿಗೆ ಪಟ್ಟವಾಗುವಂತೆ ಮಾಡಬೇಕೆಂದು ಎಣಿಸಿ, ಹಿಂದೆ ದಶರಥನು ಕೈಕೇಯಿಗೆ ಕೊಟ್ಟ ವರಗಳನ್ನು ಈಕೆಯೂ ತಿಳಿದಿರುವುದರಿಂದ ಈ ವರಗಳ ಮೂಲಕ ರಾಮನಿಗೆ ವನವಾಸವನ್ನೂ ಭರತನಿಗೆ ಪಟ್ಟವನ್ನೂ ದೊರಕಿಸಬೇಕೆಂದು ಕೈಕೆಯನ್ನು ಪ್ರೇರೇಪಿಸಿದಳು. ಕೈಕೆಯು ಅದಕ್ಕೊಪ್ಪಿ, ದಶರಥನು ತನ್ನ ಮನೆಗೆ ಬಂದಾಗ ತಾನು ದುಃಖದಲ್ಲಿದ್ದಂತೆ ತೋರಿಸಿಕೊಂಡು, ತನಗೆ ಸಮಾಧಾನವಾಗಬೇಕಾದರೆ ರಾಮನನ್ನು ಹದಿನಾಲ್ಕು ವರುಷ ಅರಣ್ಯಕ್ಕಟ್ಟಿ ಭರತನಿಗೆ ಪಟ್ಟಕಟ್ಟಬೇಕೆಂದು ಕೇಳಿದಳು.

**ವಿಭೀಷಣ ರಾವಣ ಸಂವಾದ:**—ಶ್ರೀರಾಮನು ಅರಣ್ಯದಲ್ಲಿರುವಾಗ ಅವನ ಪತ್ನಿ ಸೀತೆಯನ್ನು ರಾವಣನು ಅಪಹರಿಸಿದನು. ಈ ಸಮಾಚಾರವನ್ನು ತಿಳಿದ ರಾಮನು ಕಿಷ್ಕಿಂಧೆಯ ರಾಜನಾದ ಸುಗ್ರೀವನ ಸಹಾಯವನ್ನು ಪಡೆದು ಕಪಿಸೇನೆಯೊಡನೆ ದಕ್ಷಿಣಸಮುದ್ರ ತೀರಕ್ಕೆ ಬಂದು ಬೀಡಿಕೆ ಬಿಟ್ಟಿರಲು, ಇತ್ತ ಲಂಕೆಯಲ್ಲಿ ರಾವಣನ ಸಹೋದರನಾದ ವಿಭೀಷಣನು ಅಣ್ಣನ ಕಾರ್ಯವನ್ನು ಮೆಚ್ಚದೆ ಸೀತೆಯನ್ನು ರಾಮನಿಗೆ ಹಿಂತಿರುಗಿ ಒಪ್ಪಿಸಬೇಕೆಂದು ಬುದ್ಧಿವಾದವನ್ನು ಹೇಳಿದನು. [ಈ ವಿವರಕ್ಕಾಗಿ 'ಆರ್ಯಮತೋಪಾಖ್ಯಾನ' ಓದುವುದು.]

**ಆನಂದ ರಾಮಾಯಣ:**—ಈ ಗ್ರಂಥವು ಸುಮಾರು 18ನೆಯ ಶತಮಾನದಲ್ಲಿ ಉಂಟಾಯಿತು. ಗ್ರಂಥವನ್ನು ಬರೆದ ಕವಿಯ ಹೆಸರು ತಿಮ್ಮಾರ್ಯನು ಎಂದು; ಇವನು ಬ್ರಾಹ್ಮಣ ಜಾತಿಯವನು. ಸಂಸ್ಕೃತದಲ್ಲಿರುವ ಆನಂದ ರಾಮಾಯಣದ ಆಧಾರದ ಮೇಲೆ ಈ ಗ್ರಂಥವನ್ನು ಬರೆದನು. ಇದನ್ನು ಓದತಕ್ಕವರಿಗೆ ಆನಂದವಾಗುವುದೆಂಬ ಕಾರಣದ ಮೇಲೆ ಇದಕ್ಕೆ ಆನಂದ ರಾಮಾಯಣವೆಂದು ಹೆಸರು ಬಂದಂತೆ ಮೂಲಗ್ರಂಥದಿಂದ ತೋರುವುದು.

ವಿಶ್ವಾಮಿತ್ರ ಮಹರ್ಷಿಯು ತನ್ನ ಯಜ್ಞ ರಕ್ಷಣಾರ್ಥವಾಗಿ ರಾಮಲಕ್ಷ್ಮಣರನ್ನು ಒಯ್ದು ಯಜ್ಞವು ಸಂರಕ್ಷಿಸಲ್ಪಟ್ಟ ಮೇಲೆ, ಇವರನ್ನು ಒಡಗೊಂಡು ಮಿಥಿಲಾ

ದೇಶಕ್ಕೆ ಜನಕನ ಅರಮನೆಗೆ, ಆತನು ನಡೆಸುವ ಯಜ್ಞಕ್ಕಾಗಿಯೂ, ಅವನ ಶೈವಧನುಸ್ಸಿನ ಪರೀಕ್ಷಾರ್ಥವಾಗಿಯೂ ಹೋಗುವಾಗ ಗಂಗಾನದಿಯನ್ನು ದಾಟುವ ವೇಳೆ, ಶ್ರೀರಾಮನು ಅಲ್ಲಿನದೊಂದು ಮನೋಹರವಾದ ವನವನ್ನು ಕಂಡು, ಇದಾರ ವನವೆಂದು ಕೇಳಲು, 'ವಿಶ್ವಾಮಿತ್ರನು ಇದು ಕಾಮಾಶ್ರಮ ಎಂಬ ವನವು. ಇಲ್ಲಿಯೇ ಶಿವನ ಹಣೆಗಣ್ಣಿ ಕಿಚ್ಚಿನಿಂದ ಮನ್ಮಥನು ದಗ್ಧನಾದನೆಂದು ಹೇಳಲು, ರಾಮನು ಆ ವೃತ್ತಾಂತವನ್ನು ಉಸುರಬೇಕೆಂದು ಕೇಳಿದುದಕ್ಕಾಗಿ, ವಿಶ್ವಾಮಿತ್ರನು ಪಾರ್ವತೀ ಪರಿಣಯದ ಕಥೆಯನ್ನು ಹೇಳತೊಡಗಿದನು. [ವಿವರಣೆಗೆ 'ಆರ್ಯಮತೋಪಾಖ್ಯಾನ']

**ಪ್ರಹ್ಲಾದ ಚರಿತ್ರೆ:**—ಇದು ಭಾಗವತದ ಸಪ್ತಮಸ್ಕಂಧದಲ್ಲಿ ಹೇಳಲ್ಪಟ್ಟ ಕಥೆಯು. ಯುಧಿಷ್ಠಿರನ ರಾಜಸೂಯಯಾಗದಲ್ಲಿ ಶ್ರೀಕೃಷ್ಣನಿಂದ ಮರಣವನ್ನು ಹೊಂದಿದ ಶಿಶುಪಾಲನನ್ನು ಕಂಡು ಧರ್ಮರಾಯನು ನಾರದನನ್ನು ಪ್ರಶ್ನೆಮಾಡಲು, ನಾರದನು, ಈತನೂ ದಂತವಕ್ರನೂ, ಹಿಂದೆ ಒಂದು ಕಾಲದಲ್ಲಿ ಜಯವಿಜಯರೆಂಬ ಹೆಸರಿನಿಂದ ವಿಷ್ಣುವಿನ ಬಳಿಯಲ್ಲಿದ್ದರೆಂದೂ ಸನಕಾದಿಗಳ ಶಾಪದಿಂದ ಅವರೇ ಹಿರಣ್ಯಕಶಿಪು, ಹಿರಣ್ಯಾಕ್ಷರಾಗಿ ಜನ್ಮವೆತ್ತಲು, ತಮ್ಮನನ್ನು ವಿಷ್ಣುವು ಸೂಕರರೂಪದಿಂದ ಕೊಂದುದಕ್ಕಾಗಿ ಕೋಪಗೊಂಡ ಹಿರಣ್ಯಕಶಿಪುವನ್ನು, ತಂದೆ ಮಕ್ಕಳ ವಿರೋಧದಿಂದ ವಿಷ್ಣುವು ನರಸಿಂಹನಾಗಿ ಕೊಂದನೆಂದು ಹೇಳಲು, ಯುಧಿಷ್ಠಿರನು ಆ ಕಥೆಯನ್ನು ಕೇಳುವುದಕ್ಕೆ ಇಚ್ಛೈಸಿದುದರಿಂದ ನಾರದನು ಧರ್ಮರಾಯನಿಗೆ ಆ ಕಥೆಯನ್ನು ಹೇಳತೊಡಗಿದನು. [ವಿವರಣೆಗೆ 'ಆರ್ಯಮತೋಪಾಖ್ಯಾನ'.]

## ಜೈಮಿನಿಭಾರತದೊಳಗಣ ಪದ್ಯಗಳು.

**ಚಂದ್ರಹಾಸನ ಬಾಲ್ಯ:**—ಇದನ್ನು ಬರೆದ ಕವಿಯು ಲಕ್ಷ್ಮೀಶನು. ಇವನ ಕಾಲವು ಸುಮಾರು ಕ್ರಿ. ಶ. 1700 ಎಂದು ಮ. ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ ಹೇಳುವರು; ಇವನು ಭಾರದ್ವಾಜ ಗೋತ್ರಕ್ಕೆ ಸೇರಿದ ಅಣ್ಣಮಾಂಕನೆಂಬ ಬ್ರಾಹ್ಮಣನ ಮಗನು; ಇವನ ಸ್ಥಳವು ಮೈಸೂರು ಸೀಮೆಯಲ್ಲಿ ಈಗ ಕಡೂರು ತಾಲೂಕಿಗೆ ಸೇರಿದ ದೇವನೂರು; ಇದನ್ನು ಕವಿಯು ಗ್ರಂಥದಲ್ಲಿ ದೇವಪುರನೆಂದು ಕರೆದಿರುವನು. ಈತನಿಗೆ ಕರ್ನಾಟಕವಿಚೂತವನಚೈತ್ರನೆಂದು ಬಿರುದಿದ್ದಂತೆ ತೋರುವುದು; ಜೈಮಿನಿಭಾರತವು ಬಹು ಮನೋಹರವಾದ ಶೈಲಿಯಲ್ಲಿ ವಾರ್ಧಿಕ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಇದು ಸಂಸ್ಕೃತದಲ್ಲಿ ಜೈಮಿನಿ ಋಷಿಯಿಂದ ಬರೆಯಲ್ಪಟ್ಟ ಜೈಮಿನಿಭಾರತದ ಅನುವಾದ ರೂಪವಾದ ಗ್ರಂಥವು.

ಯುಧಿಷ್ಠಿರನು ಭಾರತದ ಯುದ್ಧದಿಂದ ತನಗೆ ಬಂದ ಹತ್ಯೆಯ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಅಶ್ವಮೇಧಯಾಗವನ್ನು ಮಾಡಿದನು. ಕುದುರೆಯ ಬೆಂಗಾವ

ಲಿಗೆ ಅರ್ಜುನನು ಸಸೈನ್ಯನಾಗಿ ಹೊರಟನು. ಸಾರಸ್ವತಪುರದಿಂದ ಹೊರಟ ಕುದುರೆಯು ಮುಂದೆ ಕುಂತಳ ಮಂಡಳಕ್ಕೆ ಬರುತ್ತಲೇ ಅಲ್ಲಿಯ ರಾಜನಾಗಿದ್ದ ಚಂದ್ರಹಾಸನು ಕ್ಷತ್ರಧರ್ಮವನ್ನನುಸರಿಸಿ ಆ ಕುದುರೆಯನ್ನು ಲಾಯದಲ್ಲಿ ಕಟ್ಟಿಸಿ ಯುದ್ಧಸನ್ನದ್ಧನಾದನು. ಇತ್ತ ಅರ್ಜುನನಿಗೆ ಕುದುರೆಯನ್ನು ಹಿಡಿದವರು ಯಾರೆಂದು ತಿಳಿಯದಿರಲು, ಅದೇ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದ ನಾರದರನ್ನು ಬೆಸಗೊಂಡನು. ಆಗ ನಾರದರು ನಿನ್ನ ಕುದುರೆಯನ್ನು ಬಿಗಿದವನು ಚಂದ್ರಹಾಸನೆಂದೂ, ಅವನು ನಿನ್ನಂತೆಯೆ ಹರಿಭಕ್ತನಾದುದರಿಂದ ಅವನನ್ನು ಗೆಲ್ಲುವುದು ಅಸದಳವೆಂದೂ ಹೇಳಲು, ಅರ್ಜುನನು ಅವನ ವೃತ್ತಾಂತವನ್ನು ಕೇಳಲಿಕ್ಕೆ ಆಶಿಸಿದುದರಿಂದ ನಾರದರು ಆ ಕಥೆಯನ್ನು ಹೇಳತೊಡಗಿದರು. [ವಿವರಣೆಗೆ 'ಆರ್ಯಮತೋಪಾಖ್ಯಾನ']

**ಸೋಮೇಶ್ವರ ಶತಕ**:—ಪಾಲ್ಕುರಿಕೆಯ ಸೋಮೇಶ್ವರನೆಂಬ ಆರಾಧ್ಯ ಬ್ರಾಹ್ಮಣನೇ ಈ ಗ್ರಂಥದ ಕವಿಯು; ಈ ಗ್ರಂಥವು ಸುಮಾರು ಕ್ರಿ. ಶ. 18ನೆಯ ಶತಮಾನದ ಮಧ್ಯಭಾಗದಲ್ಲಿ ರಚನೆಯಾಗಿರಬೇಕು. ಇವನು ಲಿಂಗಾಯತರಲ್ಲಿ ಬಹು ಗಣ್ಯನಾದ ಕವಿಯು. ಸಂಸ್ಕೃತದಲ್ಲಿ ಭರ್ತೃಹರಿಯ ನೀತಿಶತಕವು ಹೇಗೆ ಪ್ರಸಿದ್ಧವಾದುದೋ ಹಾಗೆ ಕನ್ನಡದಲ್ಲಿ ಈ ಗ್ರಂಥವು ಬಹು ಗಣ್ಯವಾದುದು. ಇದು ಮತ್ತೇಭವಿಕ್ರೀಡಿತ ವೃತ್ತದಲ್ಲಿ ಬರೆಯಲ್ಪಟ್ಟು ಹಲವು ವಿಧದ ನೀತಿಸಾರಗಳನ್ನು ಉಪದೇಶ ಮಾಡುತ್ತಿರುವುದು. ಗ್ರಂಥದಲ್ಲಿ ಪ್ರಾಮುಖ್ಯವಾದ ಪದ್ಯ ನೂರೇ ಇರುವುದರಿಂದ ಇದಕ್ಕೆ ಶತಕವೆಂದು ಹೆಸರಾಯಿತು.

## ಛಂದೋ ವಿಚಾರ.

ಪದ್ಯಗಳಲ್ಲಿ ಯತಿ, ಗಣ, ಪ್ರಾಸ, ಮಾತ್ರೆಗಳ ವಿಚಾರವನ್ನು ಹೇಳುವುದೇ ಛಂದೋ ಶಾಸ್ತ್ರವೆಂದು ಕರೆಯಲ್ಪಡುವುದು. ಛಂದಸ್ಸಿನಲ್ಲಿ ಮಾತ್ರಾ ಛಂದಸ್ಸೆಂದೂ ಅಕ್ಷರ ಛಂದಸ್ಸೆಂದೂ ಎರಡು ವಿಧವಿರುವುದು. ಮಾತ್ರಾ ಛಂದಸ್ಸಿನಲ್ಲಿ ಒಂದೊಂದು ಚರಣಕ್ಕೆ ಇಷ್ಟಿಷ್ಟೇ ಮಾತ್ರೆಗಳಿರಬೇಕೆಂಬ ನಿಯಮವಿದೆ; ಆದರೆ ಅಕ್ಷರ ಛಂದಸ್ಸಿನಲ್ಲಿ ಒಂದೊಂದು ಚರಣಕ್ಕೆ ಇಷ್ಟಿಷ್ಟು ಅಕ್ಷರಗಳಿರಬೇಕೆಂದು ನಿರ್ಣಯವು.

ಈ ಗ್ರಂಥದಲ್ಲಿ ಮಾತ್ರಾ ಛಂದಸ್ಸಿಗೆ ಒಳಪಟ್ಟು ಸರ್ವಜ್ಞ ಪದ್ಯಗಳೂ, ಭಾಮಿನಿ ಷಟ್ಪದಿ, ವಾರ್ಧಿಕ ಷಟ್ಪದಿಗಳೂ, ಅಕ್ಷರ ಛಂದಸ್ಸಿಗೆ ಒಳಪಟ್ಟು ಸೋಮೇಶ್ವರ ಶತಕವೂ ಇರುವುವು. ಮಾತ್ರೆಯೆಂದರೆ ಒಂದು ಲವಕಾಲವು. ಅಂದರೆ, ಒಂದು ಹ್ರಸ್ವಸ್ವರವನ್ನು ಉಚ್ಚರಿಸಲಿಕ್ಕೆ ಬೇಕಾದಷ್ಟು ಸಮಯ. ಇದರಲ್ಲಿ ಒಂದು ಮಾತ್ರೆಯಷ್ಟು ಸಮಯದಲ್ಲಿ ಉಚ್ಚಾರವಾಗತಕ್ಕ ಅಕ್ಷರಗಳಿಗೆ ಲಘ್ವಕ್ಷರಗಳೆಂದೂ, ಎರಡು ಮಾತ್ರೆಯಷ್ಟು ಸಮಯ ಬೇಕಾದವುಗಳಿಗೆ ಗುರ್ವಕ್ಷರಗಳೆಂದೂ, ಮೂರು ಮಾತ್ರೆಯ

ಅವಕಾಶ ಬೇಕಾದವುಗಳಿಗೆ ಪ್ಲುತಗಳೆಂದೂ ಹೆಸರು. ಅರ್ಧಾಕ್ಷರಗಳಿಗೆ ಅರ್ಧ ಮಾತ್ರೆಯೆಂದು ಲೆಕ್ಕವಿರುವುದರಿಂದ ಅದು ವಿಶೇಷವಾಗಿ ಛಂದೋ ಶಾಸ್ತ್ರದಲ್ಲಿ ಗಣನೆಗೆ ಬರುವುದಿಲ್ಲ.

ದೀರ್ಘಾಕ್ಷರ, ವಿಸರ್ಗವುಳ್ಳ ಅಕ್ಷರ, ಅನುಸ್ವಾರವುಳ್ಳ ಅಕ್ಷರ, ಒತ್ತಕ್ಷರದ ಹಿಂದಿನ ಅಕ್ಷರ, ಇನ್ನು ವಿಕಲ್ಪವಾಗಿ ಅಂದರೆ ಒಮ್ಮೊಮ್ಮೆ ಪಾದದ ಕೊನೆಯ ಅಕ್ಷರ ಇವು ಎರಡು ಮಾತ್ರೆಯ ಗುರ್ವಕ್ಷರಗಳಾಗುತ್ತವೆ. ಉಳಿದುವೆಲ್ಲಾ ಲಘ್ವಕ್ಷರಗಳೇ. ಇದಕ್ಕೆ ನಾಗವರ್ಮನ ಛಂದಸ್ಸಿನಲ್ಲಿ

ಗುರುವಕ್ಕುಂ ಮುಂತೊತ್ತ
ಕ್ಕರಮಾಗಿರೆ ಪಿಂತೆನಿಂದ ಸೈಯುಕ್ಕರಮುಂ
ಗುರುಪೊತ್ತುಗಳಿಂದಪ್ಪುದು
ನಿರಂತರಂ
ಬಿಂದುವಿಸರ್ಗಂ ವ್ಯಂಜನ
ಮೊಂದಿದದಡ್ಡಕ್ಕರಂ ಪಾದಾಂತ್ಯಂ ದೀರ್ಘಂ
ಬಂದೊಡರಿವನಜಮುಖಿ ಗುರು
ವೆಂದಂ ಸೈಯಡಿಯ ನಾಗವರ್ಮ ಕವೀಂದ್ರಂ

ವೃತ್ತರತ್ನಾಕರದಲ್ಲಿ

ಸಾನುಸ್ವಾರೋ ವಿಸರ್ಗಾಂತೋ ದೀರ್ಘೋಯುಕ್ತ ಪರಶ್ಚಯಃ
ವಾ ಪದಾಂತೇತ್ವ ಸೌಗ್ವಕೊ್ರಜ್ಞೇಯೇನ್ಯೋವಾತ್ರಿತೋಲ್ಪಜುಃ

**ಅರ್ಥ:**— ಅನುಸ್ವಾರದಿಂದ ಕೂಡಿದ, ವಿಸರ್ಗಾಂತವಾದ, ದೀರ್ಘಾಯುಕ್ತವಾದ ಮುಂದೆ ಸಂಯುಕ್ತಾಕ್ಷರವುಳ್ಳ ವಿಕಲ್ಪವಾಗಿ ಪಾದಾಂತ್ಯದಲ್ಲಿ ಇರುವ ವರ್ಣಗಳು ಗುರುವರ್ಣಗಳಾಗಿರುತ್ತವೆ ಎನ್ನುವುದರಿಂದ ಉಳಿದವೆಲ್ಲಾ ಲಘುವೆಂದಾಯಿತು. ಗುರುವರ್ಣವನ್ನು ವಕ್ರರೇಖೆ (೧) ಯಿಂದಲೂ, ಲಘುವನ್ನು ಸರಳ (—) ರೇಖೆಯಿಂದಲೂ ತೋರಿಸುವರು.

## ಸರ್ವಜ್ಞನ ತ್ರಿಪದಿಯ ಲಕ್ಷಣ.

| | |
|---|---|
| ೧೧ ಬ್ರಹ್ಮ<br>— — ೧ ಸುರಪಂ<br>೧ — ಧಾತೃ<br>— — — ಅಜನೆ | ಈ ನಾಲ್ಕಕ್ಕೆ ಬ್ರಹ್ಮಗಣವೆಂದು ಹೆಸರು. |

ಮೊದಲನೆಯ ಚರಣಕ್ಕೆ 20 ಮಾತ್ರೆ, ಎರಡನೆಯದಕ್ಕೆ 17, ಮೂರನೆಯದಕ್ಕೆ 13, ಈ ರೀತಿ ಮಾತ್ರೆಗಳು ಬಂದು, ಮೊದಲನೆಯ ಚರಣದಲ್ಲಿ ಐದೈದು ಮಾತ್ರೆಯ ನಾಲ್ಕು ಗಣಗಳೂ, ಎರಡನೆಯದರಲ್ಲಿ ನಾಲ್ಕಕ್ಷರಕ್ಕೆ ಒಂದು ಗಣವೆಂತ ಎಣಿಸುತ್ತಾ ಬರುವಲ್ಲಿ ಆರನೆಯ ಸ್ಥಾನದಲ್ಲಿ ಬ್ರಹ್ಮಗಣವೂ, ಈ ನಿಯಮವನ್ನು ಅನುಸರಿಸಿ ಮೂರನೆಯ ಚರಣದಲ್ಲಿಯೂ ಹತ್ತನೆಯ ಸ್ಥಾನದಲ್ಲಿಯೂ ಬ್ರಹ್ಮಗಣವು ಬರತಕ್ಕದ್ದು.

ಉದಾ:

1 2 3 4

ᑎ— — —। ᑎ— — —। ᑎ— — —।— —ᑎ—

ಹಿಂಗಿನೊಳು ನಾತವನು ತೆಂಗಿನೊಳ ಗೆಳನೀರ = 20

5 6 7 8

ᑎ—ᑎ— — —। ᑎ— —। ᑎ— — —

ಭೃಂಗ ಕೋಕಿಲೆಯ ಕಂಠದಿ ಗಾಯನ ವ = 17

9 10 11

ᑎ— — —।ᑎ—।ᑎᑎ—

ತುಂಬಿದವ ರಾರು ಸರ್ವಜ್ಞ = 13

ಇಲ್ಲಿ ಆರನೆಯ ಗಣದಲ್ಲಿ ಮೂರು ಲಘುವಿನ, ಹತ್ತನೆಯಲ್ಲಿ ಒಂದು ಗುರು ಒಂದು ಲಘುವಿನ, ಬ್ರಹ್ಮಗಣವು ಬಂದಿರುವುದು.

**ಭಾಮಿನಿ ಷಟ್ಪದಿಯ ಲಕ್ಷಣ:**— ಮೊದಲನೆಯ ಎರಡನೆಯ ನಾಲ್ಕನೆಯ ಐದನೆಯ ಚರಣಗಳೊಂದೊಂದಕ್ಕೆ 14–14 ಮಾತ್ರೆಗಳೂ ಮೂರನೆಯ ಆರನೆಯ ಚರಣಕ್ಕೆ 23—23 ಮಾತ್ರೆಗಳೂ ಬಂದು, ಮೂರು ನಾಲ್ಕು ಮಾತ್ರೆಗಳ ಗಣಗಳಾಗಿ ವಿಭಾಗಿಸಬರುವುದು; ಎಲ್ಲಿಯೂ ಮಧ್ಯಗುರುವಾದ ಜಗಣ ಬಾರದಿರುವುದೇ ಭಾಮಿನಿ ಷಟ್ಪದಿ.

ಉದಾ:

ᑎ—।ᑎ— —।— — —।ᑎ— —

ಗೂಗೆ। ಮುಂಗಿಸಿ। ಯೆರಡು । ಮಿಾಪರಿ = 14

ᑎ —।— —ᑎ।ᑎ—।ᑎ—

ಹೋಗ। ಲತಿ ಸಂ।ತೋಷ।ದಿಂದಲಿ = 14

ᑎ—।ᑎ— —।ᑎ—।— — — —।ᑎ—।ᑎᑎ।ᑎ

ಯಾಗ।ರೋಮಶ। ಸಿಕ್ಕಿ। ದುರುಳಿನ । ಮೇಲೆ। ಬಾಯಿಕ್ಕಿ= 23

∩ — । – – – – । ∩ – – । ∩ — — ।
ಬೇಗ । ಕಡಿಯಡಿ । ಮೆಲ್ಲ । ಮೆಲ್ಲನೆ । = 14

∩ — । — — ∩ । ∩ — । – – ∩
ಮೇಗ । ರೆಯಲೇ । ಹೊತ್ತು । ಗಳೆವು = 14

∩ — । — — ∩ । ∩ — । – – – । – – – । ∩ ∩ । ∩
ಡ್ಯೋಗ। ವನುಮಾ । ಡುತ್ತ । ಲಿರೆ ನುಡಿ।ಸಿದುದು।ಮಾರ್ಜಾಲ= 23

ವಾರ್ಧಿಕ ಮತ್ತು ಭಾಮಿನಿ ಷಟ್ಪದಿಯಲ್ಲಿ ಮೂರು ಆರನೆಯ ಚರಣಗಳ ಕೊನೆಯೇ ಯತಿ ಅಥವಾ ಪಾದಾಂತವೆಂದು ಕರೆಯಲ್ಪಡುವುದರಿಂದ ಹೆಚ್ಚಾಗಿ ಆ ಚರಣಗಳ ಕೊನೆಯ ಅಕ್ಷರವು ಗುರುವಾಗುವುದು.

**ವಾರ್ಧಿಕ ಷಟ್ಪದಿ:**—ಮೊದಲನೆ, ಎರಡನೆ, ನಾಲ್ಕನೆ, ಐದನೆ ಚರಣ ಒಂದೊಂದಕ್ಕೆ 20–20 ಮಾತ್ರೆಗಳೂ ಮೂರು ಮತ್ತು ಆರನೆಯ ಚರಣ ಒಂದೊಂದಕ್ಕೆ 32–32 ಮಾತ್ರೆಗಳೂ ಬಂದು ಐದೈದು ಮಾತ್ರೆಗಳ ಗಣಗಳಾಗಿ ವಿಭಾಗಿಸಲಿಕ್ಕೆ ಬರುವುದೇ ವಾರ್ಧಿಕ ಷಟ್ಪದಿ.

ಉದಾ :

∩ — — — । ∩ — ∩ । — — ∩ — । ∩ — ∩
ಇನ್ನೊರವೆ ನಾಲಿಸಾದೊಡೆ ಪಾರ್ಥ ಧಾರ್ಮಿಕಂ = 20

∩ ∩ — । ∩ — ∩ । — — ∩ — । — — — ∩
ಮುನ್ನೋರ್ವನ್ನುಂಟು ಕೇರಳದೇಶದವನಿಪಂ = 20

∩ – – – । ∩ – ∩ । ∩ ∩ – । ∩ – ∩ । – – – ∩ । – – – ∩ – ∩
ಸನ್ನುತಗುಣೋದಯಂಮೇಧಾವಿಯೆಂಬವಂಬಲಯುತಂಬಳಿಕವಂಗೆ 32

ಇದರಂತೆಯೇ ಇನ್ನುಳಿದ ಮೂರು ಚರಣಗಳು. ಸೋಮೇಶ್ವರ ಶತಕವು ಅಕ್ಷರ ಛಂದಸ್ಸಿಗೆ ಸೇರಿ ಸಮಪಾದದ ನಾಲ್ಕು ಚರಣಗಳುಳ್ಳದ್ದಾಗಿರುವುದು. ಇದು ಚರಣ ಒಂದಕ್ಕೆ ಇಪ್ಪತ್ತು ಅಕ್ಷರಗಳುಳ್ಳದ್ದಾಗಿ ಮತ್ತೇಭವಿಕ್ರೀಡಿತ ವೃತ್ತವೆಂದು ಕರೆಯಲ್ಪಡುವುದು.

ಅಕ್ಷರ ಛಂದಸ್ಸಿಗೆ ಪ್ರತಿ ಚರಣಗಳ ಅಕ್ಷರ ಸಂಖ್ಯೆಯೇ ಪ್ರಾಮುಖ್ಯವಾದುದರಿಂದ, ಮೂರು ಮೂರು ಅಕ್ಷರಗಳಿಗೆ ಒಂದೊಂದು ಗಣವೆಂದು ಭಾವಿಸಿ ಅಂತಹ ಗಣಗಳು ಎಂಟಿರುವವೆಂದು ಛಂದೋ ಶಾಸ್ತ್ರದಲ್ಲಿ ಉಕ್ತವಾಗಿರುವುದು.

ಉದಾ :

| | | | | |
|---|---|---|---|---|
| ಮ | ∩ | ∩ | ∩ | ಇವೇ ಎಂಟು ಗಣಗಳು. |
| ಯ | — | ∩ | ∩ | |
| ರ | ∩ | — | ∩ | |
| ಸ | — | — | ∩ | |
| ತ | ∩ | ∩ | — | |
| ಜ | — | ∩ | — | |
| ಭ | ∩ | — | — | |
| ನ | — | — | — | |

ಇವುಗಳಲ್ಲಿ ಮತ್ತೇಭವಿಕ್ರೀಡಿತಕ್ಕೆ ಸಭರಾನಮ್ಲ್ಯಗಿತಿ ತ್ರಯೋದಶ ಮರ್ಣತ್ತೇಭವಿಕ್ರೀಡಿತಂ ॥ ವೃತ್ತರತ್ನಾಕರ.

ಅರ್ಥ: ಸ, ಭ, ರ, ನ, ಮ, ಯ ಎಂಬ ಗಣಗಳೂ ಲ. ಗು. ಹದಿಮೂರನೆಯ ಸ್ಥಾನದಲ್ಲಿ ಯತಿ ಎಂಬ ವಿಶ್ರಾಮ ಬರುವುದು.

ಉದಾ :

| ಸ | ಭ | ರ | ನ | ಮ | ಯ |
|---|---|---|---|---|---|
| — — ∩ | ∩ — — | ∩ — ∩ | — — — | ∩ ∩ ∩ | — ∩ ∩ |
| ಕೆಲವಂ | ಬಲ್ಲವ | ರಿಂದೆ ಕ | ಲ್ತು ಕೆಲ | ವಂ ಶಾಸ್ತ್ರಂ | ಗಳಂ ಕೇ |

ಯತಿ.



